# ಜೀವನ್ ಹನುಮಾನ



daCunha-LIC-115 KAN

## ಅತಿ ಪೈಪೋಟಿಯ ಪಂದ್ಯಾಟಗಳ ಮಧ್ಯೆ ಒಡಾಟ

ಇಷ್ಟರಲ್ಲಿ ಬುದ್ಧಿಗೆ ಸಂಬಂಧಿಸಿದ ವಿಷಯಗಳನ್ನೆಲ್ಲ ತಿಳಿದುಕೊಂಡ ಶೋಧಕಜೋಡಿ ಇದೀಗ ಅಷ್ಟೇ ಪ್ರಾಮುಖ್ಯತೆಯ ಇನ್ನೊಂದು ವಿಷಯ...'ಶರೀರ'ದ ಬಗ್ಗೆ ತಿಳಿದುಕೊಳ್ಳಲು ಉತ್ಸುಕರಾಗಿದ್ದಾರೆ. ಕಾರ್ಯರತ ವ ಕ್ರೀಡಾರತ ದೇಹ ಹೇಗೆ ವರ್ತಿಸುವುದೆಂಬುದನ್ನು ಅವರಿಗೀಗ ತಿಳಿಯಬೇಕಾಗಿದೆ.

ವಿಶಾಲ ಹಾಗೂ ವೈವಿಧ್ಯಪೂರ್ಣವಾದ ಕ್ರೀಡಾಜಗತ್ತಿನಲ್ಲಿ ಕ್ರಿಕೆಟ್, ಫುಟ್‌ಬಾಲ್ ಇವನ್ನು ತಿಳಿಯದವರಾರು? ಆದರೆ ಜಾಗತಿಕ ದಾಖಲೆ ಸ್ಥಾಪಿಸಲೋಸುಗ ಹಾರುವ ವಿಮಾನದಿಂದ ಕೆಳಗೆ ನೆಗೆಯುವವರಿದ್ದಾರೆಂಬುದು ಆಶ್ಚರ್ಯಕಾರಕ! ಮೋಟಾರ್ ಸೈಕಲುಗಳ ಓಟ, ಪಾರಿವಾಳಗಳನ್ನು ಹಾರಿಸುವ ಪಂದ್ಯಗಳು ಗೊತ್ತಿರಬೇಕಷ್ಟೆ? ಅಸಾಮಾನ್ಯ, ಅಸಾಧಾರಣ ಪಂದ್ಯಗಳಲ್ಲಿ ಕೆಲವು ಇಲ್ಲಿವೆ.



ಪಾಲ್ ಮೆಕ್ರೀಡಿ ಮತ್ತು ಬ್ರಿಯಾನ್ ಅಲೆನ್ 1979 ಮನುಷ್ಯಶಕ್ತಿಯಿಂದ ವಿಮಾನ ಹಾರಿಸುವ ಹೊಚ್ಚಹೊಸ ಕ್ರೀಡೆಯೊಂದನ್ನು ಆರಂಭಿಸಿದರು. 'ಗೊಸಾಮಿರ್ ಅಲ್ಬಟ್ರೋಸ್' ಎಂಬ ವಿಮಾನವನ್ನು ಪೆಡಲ್ ಮಾಡುತ್ತ ಅಲೆನ್ 37 ಕಿಲೋಮೀಟರ್ ಇಂಗ್ಲಿಷ್ ಕಾಲುವೆಯನ್ನು ಬರೀ 3 ಘಂಟೆಗಳಲ್ಲಿ ದಾಟಿದನು. ಈ ಹೊಸ ಕ್ರೀಡಾಕ್ಷೇತ್ರದಲ್ಲಿ ಹೊಸಹೊಸ ಪಂದ್ಯಗಳನ್ನೂ ಹೊಸಹೊಸ ದಾಖಲೆಗಳನ್ನೂ ಪ್ರತೀಕ್ಷಿಸಬಹುದು.





ಪಾರಿವಾಳ ಹಾರಿಸುವ ದೂರ ದಾಖಲೆಯನ್ನು 1845ರಲ್ಲಿ ವೆಲ್ಲಿಂಗ್ಟನ್‌ನ ಪ್ರಥಮ ಡ್ಯೂಕ್ (ಸರದಾರಶ್ರೇಷ್ಠ)ನ ಪಾರಿವಾಳವೊಂದು ಸ್ಥಾಪಿಸಿತು. ಅದು 55 ದಿನಗಳಲ್ಲಿ 11200 ಕಿಲೋಮೀಟರ್ ದೂರ ಹಾರಿತು. ಪಾರಿವಾಳ ಹಾರುವ ವೇಗದ ದಾಖಲೆ: ಘಂಟೆಗೆ 156.61 ಕಿಲೋಮೀಟರ್ ಅದು 1961ರಲ್ಲಿ ಆಯರ್‌ಲೇಂಡ್‌ನ ಡಂಗರ್‌ವಾನ್‌ನಲ್ಲಿ ನಡೆದ ಪಂದ್ಯವೊಂದರಲ್ಲಿ ಸ್ಥಾಪಿಸಲ್ಪಟ್ಟಿತು.



ಇಟಲಿಯ ಜಿ. ರಿವೋಲಿ ಎಂಬಾತ 1967ರಲ್ಲಿ 16 ನಿಮಿಷ 42 ಸೆಕೆಂಡುಗಳ 10,000 ಮೀಟರ್ ರೋಲರ್ ಸ್ಕೇಟಿಂಗ್ ದಾಖಲೆ ಸ್ಥಾಪಿಸಿದ.





ತಡವಾಗಿ ತೆರೆಯುವ ಹಾರಿಕೆ (ಪುರುಷರಿಗೆ)ಯ ಜಾಗತಿಕ ದಾಖಲೆ ರಷ್ಯಾದ ಡಿ. ಅಂಡ್ರೇಯೇವ್‌ನ ಹೆಸರಿನಲ್ಲಿದೆ. 1962ರಲ್ಲಿ ಅವನು 24,500 ಮೀಟರ್ ಸ್ವತಂತ್ರನಾಗಿ (ಪ್ಯಾರಾಚೂಟ್ ಬಿಡಿಸದೆ) ಹಾರಿದನು. 1979ರಲ್ಲಿ 10 ಯುವಕರ ತಂಡವೊಂದು ಚಿಲ್ಟೋರ್ನ್‌ನಲ್ಲಿ 5-16 ಸೆಕೆಂಡುಗಳಲ್ಲಿ ಆಕಾಶಮಧ್ಯದಲ್ಲಿ ದಶಭುಜ ನಕ್ಷತ್ರವೊಂದನ್ನು ಸೃಜಿಸಿ ಮುಂಚಿನ 8-6 ಸೆಕೆಂಡುಗಳ ಸೋವಿಯೆಟ್ ದಾಖಲೆಯನ್ನು ಅಳಿಸಿದರು.





ಅಮೇರಿಕದ ಡಿ. ವೆಸ್ಕೊ ಎಂಬಾತ 1975ರಲ್ಲಿ ಬೊನಿವಿಲ್ಲೆಯಲ್ಲಿ ಯಮಾಹಾ ಮೋಟಾರ್ ಸೈಕಲೊಂದರ ಮೇಲೆ ಸವಾರಿ ಮಾಡಿ ಘಂಟೆಗೆ 487.5 ಕಿಲೋಮೀಟರ್ ಜಾಗತಿಕ ವೇಗದ ದಾಖಲೆ ನಿರ್ಮಿಸಿದ. ಕೆನ್ನಿ ರೊಬರ್ಟ್ಸ್ 1979ರಲ್ಲಿ ಜಾಗತಿಕ ರೋಡ್ ರೇಸಿಂಗ್ ಛಾಂಪಿಯನ್ ಆದ ಇನ್ನೊಬ್ಬ ಅಮೇರಿಕನ್.

ನಿಮ್ಮ ಭವಿತವ್ಯವನ್ನು
ಸಂರಕ್ಷಿಸುವ ಸುಭದ್ರ
ಸುನಿಶ್ಚಿತ ವಿಧಾನ-ಜೀವವಿಮೆ



ಭಾರತೀಯ
ಜೀವವಿಮಾ ನಿಗಮ



# ಚಂದಮಾಮ

ಅಕ್ಟೋಬರ್ 1981



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೭೫

ವಾರ್ಷಿಕ ಚಂದಾ ರೂ. ೨೧.೦೦








# ಉತ್ಸವಕ್ಕಾಗಿ ವಿಶೇಷ ಕೊಡುಗೆ

## ರೂ. 12 ರಿಂದ
## ರೂ. 32 ರ ವರೆಗೆ ಉಳಿಸಿರಿ-

**ಈಗಲೇ ಚಂದಮಾಮ ಕ್ಲಾಸಿಕ್ಸ್ ಮತ್ತು ಕಾಮಿಕ್ಸ್‌ಗಳಿಗೆ ಚಂದಾದಾರರಾಗಿರಿ.**

ಈ ಹೊಸ ಪಕ್ಷಪತ್ರಿಕೆ ಹಿಂದೀ, ಗುಜರಾತಿ, ಮರಾಠಿ, ಬಂಗಾಳಿ ಮತ್ತು ಕನ್ನಡ ಭಾಷೆಗಳಲ್ಲಿ ಪ್ರಕಟವಾಗುತ್ತದೆ.

| | ಸಾಮಾನ್ಯ ದರ | ರಿಯಾಯಿತಿಯ ದರ |
|---|---|---|
| 12 ತಿಂಗಳುಗಳಿಗೆ (24 ಸಂಚಿಕೆಗಳು) | ರೂ. 48-00 | ರೂ. 36-00 |

ಹೆಚ್ಚಿನ ಅಂಚೆಯ ವೆಚ್ಚ ಕೊಡಬೇಕಾಗಿಲ್ಲ.

ಚಂದಮಾಮ ಕ್ಲಾಸಿಕ್ಸ್ ಮತ್ತು ಕಾಮಿಕ್ಸ್-ಇವು ಕಾಮಿಕ್ಸ್‌ಗಳಲ್ಲಿಯೇ ಹೊಸ ಕಲ್ಪನೆ. ಇವು ಜಗತ್ಪ್ರಸಿದ್ಧ

## ವಾಲ್ಟ್ ಡಿಸ್ನಿಯವರ

ವರ್ಣರಂಜಿತ ಕೃತಿಗಳು ಮತ್ತು ವಿಚಾರಪೂರ್ಣ ವಿಷಯಗಳಿಂದ ಒಂದು ಹೊಸ ಗಾತ್ರವನ್ನು ಪಡೆದಿವೆ.

**ಆರ್ಡರನ್ನು ಕಳಿಸುವ ಕ್ರಮ :**

ವರ್ಗಣಿಯ ಹಣವನ್ನು ಕಳಿಸುವುದು ಸುಲಭ. ಕೆಳಗೆ ಕೊಟ್ಟಿರುವ ಕೂಪನನ್ನು ತುಂಬಿ, ಅದನ್ನು ರೂ. 36 ಅಥವಾ ರೂ. 36 ರ, ಕ್ರಾಸ್‌ಮಾಡಿದ ಪೋಸ್ಟಲ್ ಆರ್ಡರ್‌ನೊಂದಿಗೆ ಕೆಳಗೆ ಕಾಣಿಸಿದ ವಿಳಾಸಕ್ಕೆ ಕಳಿಸಿರಿ. ನೀವು ಮನಿ ಆರ್ಡರ್ ಮೂಲಕವೂ ಹಣ ಕಳುಹಿಸಬಹುದು. ಆದರೆ ಮನಿ ಆರ್ಡರ್‌ನ ರಸೀದಿಯನ್ನೂ ಕೂಪನನ್ನೂ ಈ ವಿಳಾಸಕ್ಕೆ ಕಳುಹಿಸಬೇಕು.




ಡಾಲ್ಟನ್ ಏಜೆನ್ಸೀಸ್
ಚಂದಮಾಮ ಬಿಲ್ಡಿಂಗ್ಸ್,
ವಡಪಳನಿ, ಮದರಾಸು-600 026

ಈ ಕೊಡುಗೆ ನವಂಬರ್ 14, 1981ರ ವರೆಗೆ ಮಾತ್ರ ಲಭ್ಯ-ಭಾರತದಲ್ಲಿರುವ ಚಂದಾದಾರರಿಗೆ ಮಾತ್ರ.

ಶ್ರೀ / ಕುಮಾರಿ ______________ ಮೊತ್ತ ರೂ. ________

ವಿಳಾಸ ______________________________

______________________________

ಪಿನ್ ________

ಜನನ ತಾರೀಖು ______________ ಸಹಿ ________

ಪತ್ರಿಕೆಯನ್ನು ______ ಸಂಚಿಕೆಯಿಂದ ಪ್ರಾರಂಭಿಸಿ ______ ತಿಂಗಳುಗಳಿಗೆ ಕಳುಹಿಸಿರಿ

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

"ಮಿತ್ರ" ಎಂದರೆ ಅವನಿಗೆ ಇನ್ನೊಬ್ಬನ ಸಂಬಂಧವಿದೆಯೆಂದು ಗೊತ್ತಾಗುತ್ತದೆ. ಮೈತ್ರೀಭಾವವು ಒಬ್ಬನಿಗೆ ಇನ್ನೊಬ್ಬನ ಮೇಲಿರುವ ಮನೋಭಾವವೆನಿಸುತ್ತದೆ. ಪವಿತ್ರವಾದ ಮೈತ್ರಿ ಮಿತ್ರನ ಹಿತ ಚಿಂತನೆ ಮಾಡಿಕೊಂಡಿರಬೇಕು. ಹಾಗೆಯೇ ಅವನ ಮಿತ್ರನೂ ಇದ್ದರೆ ಮಾತ್ರ ಅದು ನಿಜವಾದ ಮೈತ್ರಿ, ಇಂತಹ ಮೈತ್ರಿ ಬಹಳ ಅಪೂರ್ವವಾದುದರಿಂದಲೇ, ಒಳ್ಳೆಯ ಮಿತ್ರರು ಪುಣ್ಯವಂತರಿಗಷ್ಟೇ ಸಿಗುವರೆಂದು ಹೇಳುತ್ತಾರೆ. ಇದನ್ನು ನೆನಪಿಗೆ ತರುವಂತೆ ಈ ಸಂಚಿಕೆಯಲ್ಲಿ "ಪ್ರಾಣಮಿತ್ರ" ಎಂಬ ಜಾತಕಕಥೆ ಒಪ್ಪುತ್ತದೆ.

**ಅಮರವಾಣಿ**

ಬೃಹಸ್ಪತೇರಪಿ ಪ್ರಾಜ್ಞೋ ನ ವಿಶ್ವಾಸೇ ವ್ರಜೇನ್ನರಃ
ಯ ಇಚ್ಛೇದಾತ್ಮನೋ ವೃದ್ಧಿಮಾಯುಷ್ಯಂ ಚ ಸುಖಾನಿಚ.

ಬೃಹಸ್ಪತಿಗಿಂತ ಹೆಚ್ಚಿನ ತಿಳುವಳಿಕೆಯುಳ್ಳವನಾದರೂ ತನ್ನ ಕ್ಷೇಮವನ್ನೂ ಸುಖವನ್ನೂ ಕಾಪಾಡಿಕೊಳ್ಳಲು ನೋಡುವವನು ಇತರರ ಮಾತನ್ನು ಬಿಡಿಸಿನೋಡದೆ ನಂಬಬಾರದು.

ಸಂಪುಟ : ೩೩ ಅಕ್ಟೋಬರ್ '೮೧ ಸಂಚಿಕೆ : ೪

ಬಿಡಿ ಪ್ರತಿ ರೂ. ೧-೨೫ : : ವಾರ್ಷಿಕ ಚಂದಾ ರೂ. ೨೧-೦೦




CHITRA



# ಹುಗಿದ ಪುಣ್ಯ

ಅನಂತಪ್ಪನು ಏನೋ ಕೆಲಸದ ಮೇಲೆ ಪಕ್ಕದ ಊರಿಗೆ ಹೋಗಿ, ಹಿಂದಿರುಗಿ ಮನೆಗೆ ಮುಟ್ಟಿದಾಗ, ರಾತ್ರಿ ಎರಡನೇ ಜಾಮವಾಗಿತ್ತು.

ಬಹಳ ಹೊತ್ತು ಬಾಗಿಲು ಬಡೆದು ಕರೆದ ಮೇಲೆ, ಅವನ ಹೆಂಡತಿ ಅರುಂಧತಿ ಎದ್ದುಬಂದು ಬಾಗಿಲು ತೆರೆದು, "ನೀವಾ ಈಗ ಬರೋದು ?" ಎಂದು ಆಕಾಶವನ್ನು ನೋಡಿ, "ಈ ಅರ್ಧರಾತ್ರಿಗೆ ಬಂದಿರಲ್ಲ ?" ಎಂದಳು ಆಶ್ಚರ್ಯದಿಂದ.

ಬೆಳಿಗ್ಗೆ ಮನೆಯಿಂದ ಹೊರಟಾಗ ಅನಂತಪ್ಪ ತಾನು ಮರುದಿನವಷ್ಟೇ ಹಿಂದಿರುಗುವುದು ಎಂದು ಹೆಂಡತಿಯೊಂದಿಗೆ ಹೇಳಿದ್ದ.

"ಹೋದ ಕೆಲಸ ಬೇಗ ಮುಗಿದು ಹೋಯಿತು. ಸಾಯಂಕಾಲವೇ ಒಂದು ಬಾಡಿಗೆಯ ಗಾಡಿಯಲ್ಲಿ ಹೊರಟುಬಿಟ್ಟೆ. ಅರ್ಧದಾರಿಯಲ್ಲಿ ಗಾಡಿಯ ಚಕ್ರ ಕೆಸರಿನಲ್ಲಿ ಸಿಕ್ಕಿಕೊಂಡಿತು, ಎಷ್ಟಕ್ಕೂ ಮೇಲೆ ಬರಲಿಲ್ಲ. ಮತ್ತೇನು ಮಾಡುವುದು ? ದೇವರೇ ಗತಿಯೆಂದು ಅಲ್ಲಿಂದ ನಡೆದು ಕೊಂಡು ಬರುವಾಗ ಇಷ್ಟು ಹೊತ್ತಾಯಿತು." ಎನ್ನುತ್ತಾ ಮನೆಯೊಳಗೆ ಬಂದ ಅನಂತಪ್ಪ.

ಅವನು ಕಾಲು ತೊಳೆಯುತ್ತಿರುವಾಗ ಅರುಂಧತಿ ಅವನ ಹತ್ತಿರಬಂದು, "ಸಾಯಂಕಾಲ ಏನಾಯಿತು ಗೊತ್ತಾ ? ಆ ಕನಕಯ್ಯನ ಹೆಂಡ್ತಿ ಗಯ್ಯಾಳಿ ದೊಡ್ಡ ರಗಳೆ ಎಬ್ಬಿಸಿದಳು. ನಮ್ಮ ಬೆಕ್ಕು ಅವರ ಮನೇಲಿ ಹಾಲು ಕುಡಿಯಿತಂತೆ. ನೀವು ಊರಿನಿಂದ ಬಂದ ಕೂಡಲೇ ತನ್ನ ಗಂಡನಹತ್ತಿರ ಹೇಳಿ ನಿಮ್ಮ ತಲೆ ಒಡೆಸುತ್ತಾಳಂತೆ ! ಹೇಳಿದ ಹಾಗೆ ಮಾಡಿಸುವವಳೇ ಅವಳು ! ನನಗೇನೋ ಭಯವಾಗಿದೆ ಅಂದ್ರೇ !" ಎಂದು ದೂರು ಹೇಳಿದಳು.

ಅನಂತಪ್ಪನ ಮನೆಯ ಹಿಂದುಗಡೆಯಲ್ಲೇ ಕನಕಯ್ಯನ ಮನೆಯಿದೆ. ಈ ಎರಡು ಕುಟುಂಬಗಳ ನಡುವೆ ಹಸಿಹಲ್ಲು ಬಿದ್ದರೂ ಭಗ್ಗನೆ ಉರಿದು ಬಿಡುತ್ತಿತ್ತು.

"ಬೊಗಳಲಿಬಿಡೇ. ಬೊಗಳುವನಾಯಿ ಕಚ್ಚದು. ಧೈರ್ಯವಾಗಿರು. ನನಗಿಷ್ಟು ಬೇಗ ಬಡಿಸು" ಎಂದನು ಅನಂತಪ್ಪ.

ಅರುಂಧತಿ ನಾಲಗೆ ಕಚ್ಚಿಕೊಂಡಳು. ಗಂಡನು ನಾಳೆ ಬರುವೆನೆಂದು ಹೇಳಿದ್ದರಿಂದ ಅವಳು ತನಗೆ ಮಾತ್ರ ಅಡಿಗೆ ಮಾಡಿಕೊಂಡು ಉಂಡು ತೀರಿ

ಎಂ. ಕೆ. ಈಶ್ವರರಾವು

ಸಿದ್ದಳು. ಅವಳು ಈ ಸಂಗತಿಯನ್ನು ಗಂಡನೊಂದಿಗೆ ಹೇಳಿ, "ನೀವು ಹೀಗೆ ರಾತ್ರೀಲಿ ಬರುತ್ತೀರಿ ಅಂತ ಕನಸು ಕಂಡೆನೇ ? ಈಗ ಏನು ಮಾಡಲಿ ದೇವ್ರೇ!" ಎಂದಳು ಸಂಕಟದಿಂದ. ಹಾಗೆಯೇ ಚಡಪಡಿಸುತ್ತಾ ಅದೂ ಇದೂ ತೆಗೆದಳು.

ಅವಳು ಹೇಳುವುದನ್ನು ಕೇಳಿ ಅನಂತಯ್ಯನ ಹೊಟ್ಟೆಯ ಹಸಿವೆಯು ಭುಗಿಲಿನೊಂದಿಗೆ ಕೋಪದ ಬಿಸಿಯೂ ಸೇರಿತು. "ಹೀಗೆ ಹೊತ್ತು ಕಳೆದು ನನ್ನನ್ನು ಕೊಲ್ತೀಯಾ? ಬೇಗನೇ ಪಾವಕ್ಕಿ ಬೇಯಿಸಿ ಕೆಳಗಿಳಿಸು. ಉಪ್ಪಿನ ಕಾಯಿಯೂ ಉಪ್ಪೂ ಇದೆಯಷ್ಟೆ? ಅಷ್ಟು ಸಾಕು. ಏನಿದ್ದರೂ ಮುಕ್ಕುವಷ್ಟು ಹಸಿವೆ ಗೊತ್ತಾ?" ಎಂದು ಅನಂತಯ್ಯ ಗುಡುಗಿದನು.

ಅರುಂಧತಿ ಬೆಂಕಿ ಹಚ್ಚಿ ನೀರಿಡುತ್ತ, "ಉಪ್ಪಿನ ಕಾಯಿ ಚಿಕ್ಕ ಬುಡ್ಡೀದು ಮುಗಿದಿದೆ. ದೊಡ್ಡ ಜಾಡೀ ಅಟ್ಟದ ಹಲಗೆಯಲ್ಲಿದೆ. ಈ ರಾತ್ರೀಲಿ ಹೇಗೆ ತೆಗೆದೇನು ? ಯಾವ ಚೇಳೋ ಸರಸುರಿಯೋ! ಅಂದ ಹಾಗೆ ಮನೇ ಹಿಂದೆ ಹರುವೇಗಿಡಗಳಿವೆ ಯಷ್ಟೆ ? ನೀವು ಹೋಗಿ ಅದನ್ನಿಷ್ಟು ತಂದುಬಿಡಿ. ಅಷ್ಟರಲ್ಲಿ ಅನ್ನವಾಗುತ್ತೆ. ಅನ್ನ ಆರುವುದರೊಳಗೆ ಹರುವೇ ಪಲ್ಯವೂ ಆಗುತ್ತೆ. ಸಮಾಧಾನದಿಂದ ಹೊಟ್ಟೇ ತುಂಬ ಊಟ ಮಾಡಬಹುದು" ಎಂದಳು.

ಉಪಾಯವಿಲ್ಲದೆ ಅನಂತಪ್ಪನು ಮನೆಯ ಹಿಂದೆ ಹೋದನು. ಎಲ್ಲೆಲ್ಲಾ ಕತ್ತಲೆ ಇಡುಗಿತ್ತು. ಅವನು ಅಭ್ಯಾಸದಂತೆ ಹರುವೇ ಗಿಡಗಳ ಓಳಿಯ ಹತ್ತಿರ ಹೋದನು.

ಹರುವೇ ಓಳಿಯ ಹತ್ತಿರ ಅವನು ತಡಕಾಡು ತ್ತಿರಲು ಕಾಲಿನಡಿಗೆ ಏನೋ ಮೆತ್ತಗೆ ತಗಲಿತು. ಅವನು ಮೆಟ್ಟಿಬಿದ್ದು ಮೆಲ್ಲನೆ ಪರೀಕ್ಷಿಸಿ ನೋಡಿದಾಗ ಅದೊಂದು ಬೆಕ್ಕಿನಮರಿ.



ನಾಲ್ಕು ದಿನಗಳಕೆಳಗೆ ಅನಂತಪ್ಪನ ಮನೆಯ ಬೆಕ್ಕು ನಾಲ್ಕು ಮರಿಗಳನ್ನು ಹಾಕಿತ್ತು; ಅವುಗಳಲ್ಲಿ ಬೆಳ್ಳಗಿನ ಬೆಕ್ಕಿನ ಮರಿ ಅವನ ಕಾಲಡಿಯಲ್ಲಿತ್ತು. ಅನಂತಪ್ಪ ಅದನ್ನು ಅಲುಗಿಸಿ ನೋಡಿದಾಗ, ಅದು ಸತ್ತಿರುವುದೆಂದು ತಿಳಿದು ಜುಮುಗುಟ್ಟಿದನು.

ಬೆಕ್ಕನ್ನು ಕೊಂದ ಪಾಪವು ಸುಮ್ಮನೆ ಬಿಡುವುದಿಲ್ಲಂತೆ. ಇದನ್ನು ನೆನದು ಅವನಿಗೆ ರೋಮಾಂಚನವಾಯಿತು.

ಈ ಪಾಪದ ಪರಿಹಾರಕ್ಕಾಗಿ ಏನೇನು ಹೋಮ ಮಾಡಬೇಕೋ ? ಎಷ್ಟು ಹಣ ವ್ಯಯವಾಗುವುದೋ ? ಇಂಥವುಗಳಲ್ಲಿ ಅರುಂಧತಿಗೆ ತುಂಬಾ ನಂಬುಗೆ. ಆದ್ದರಿಂದ ಈ ಸುದ್ದಿ ಹರಡದಂತೆ ಅದನ್ನು ಇಲ್ಲಿಯೇ ಹುಗಿದು ಗಫ್‌ಚಿಪ್ಪಾಗಿರುವುದೇ ಒಳ್ಳೇದೆಂದು ಒಂದು ನಿಶ್ಚಯಕ್ಕೆ ಬಂದು, ಸಮಾಧಾನ ತಾಳಿದನು. ಅದನ್ನು ಖನನ ಮಾಡಿದ ಪುಣ್ಯವಾದರೂ ತನಗೆ ಬಾರದಿರದು.



ಹೀಗೆ ನೆನದು ಅನಂತಪ್ಪನು ಮೆಲ್ಲನೆ ಮನೆಯೊಳಗೆ ಬಂದನು. ಅಡಿಗೇ ಮನೆಯಲ್ಲಿರುವ ಆರುಂಧತಿಗೆ ಅದೊಂದೂ ತಿಳಿಯದು. ಅವನು ಮೂಲೆಯಲ್ಲಿದ್ದ ಗುದ್ದಲಿಯನ್ನು ಎತ್ತಿಕೊಂಡು ಹೋಗಿ, ಹರುವೇ ಓಳಿಯ ಪಕ್ಕದಲ್ಲೇ ಹೊಂಡ ತೋಡಿ ಬೆಕ್ಕಿನ ಮರಿಯ ಶವವನ್ನು ಅದರಲ್ಲಿ ಹಾಕಿ ಮಣ್ಣು ಮುಚ್ಚಿ, ಹರುವೇ ಸೊಪ್ಪನ್ನಷ್ಟು ಕೊಯ್ದುಕೊಂಡು ಮನೆಯೊಳಗೆ ಬಂದನು.

"ಒಂದಿಷ್ಟು ಹರುವೇ ಸೊಪ್ಪು ತರಲಿಕ್ಕೇ ನಿಮಗಿಷ್ಟು ಹೊತ್ತಾಯಿತು. ನಾನು ನಿಮಿಷದಲ್ಲಿ ಅನ್ನ ಬೇಯಿಸಬೇಕು. ನೋಡಿ, ಅನ್ನ ಬೆಂದಾಯಿತು. ಬೇಗ ಆ ಸೊಪ್ಪನ್ನಿಷ್ಟು ಹಚ್ಚಿರಿ, ಒಗ್ಗರಣೆ ಗಿಡುತ್ತೇನೆ" ಎಂದಳು ಅರುಂಧತಿ. ಅವಳು ಸೊಪ್ಪನ್ನು ಆರಿಸಿ ಮುಷ್ಟಿಮಾಡಿ ಕೊಡುತ್ತಿರಲು, ಅನಂತಪ್ಪನು ಹಚ್ಚತೊಡಗಿದನು. ಇಲ್ಲಿ ಹೀಗೆ ಶಬ್ದವಾಗುವುದನ್ನು ಹಿಂದಿನ ಮನೆಯ ಕನಕಯ್ಯನ ಹೆಂಡತಿಗೆ ಕೇಳಿ, ಅವಳು ಎದ್ದು ಹೊರಗೆ ಬಂದು ಕತ್ತಲೆಯಲ್ಲಿ ಏನು ನಡೆಯುವುದೆಂದು ಪರೀಕ್ಷಿಸುತ್ತಿದ್ದಳು. ಅನಂತಪ್ಪ ಗುದ್ದಲಿಯಿಂದ ಅಗೆಯುವುದನ್ನು ಅವಳು ಗಮನಿಸಿ ಕಣ್ಣಗಲಿಸಿ ಆಶ್ಚರ್ಯಪಟ್ಟಳು. ಅನಂತಪ್ಪ ಮನೆಯೊಳಗೆ ಹೋಗಿ ಬಾಗಿಲು ಹಾಕಿದ ಕೂಡಲೇ ಕನಕಯ್ಯನ ಹೆಂಡತಿ ಅವಸರವಸರವಾಗಿ ತನ್ನ ಮಲಗುವ ಕೋಣೆಗೆ ಹೋಗಿ, ಗಂಡನನ್ನು ಮುಟ್ಟಿ ತಟ್ಟಿ ಎಬ್ಬಿಸಿದಳು.

"ಅರ್ಧರಾತ್ರಿಗೆ ಎಬ್ಬಿಸಲು ಕೊಂಪೆ ಮುಳುಗಿತೇ?" ಎಂದು ಕನಕಯ್ಯ ಕಣ್ಣು ತೆರೆದು ಮೈಮುರಿದುಕೊಂಡನು. "ಏಳೀಂದ್ರೆ. ನಮ್ಮ ಕೊಂಪೆ ತುಂಬಿಕೊಳ್ಳುತ್ತೇ ಅಂದೆ. ಅನಂತಪ್ಪ ಅವರ ಹರುವೇ ಓಳೀ ಹತ್ತಿರ ಹೊಂಡ ತೆಗೆದು, ಬಂಗಾರವೋ ಹಣವೋ ಹುಗಿದಿಡುತ್ತಿದ್ದಾನೆ. ಈ ಹೊತ್ತಿನಲ್ಲಿ, ಊರಲ್ಲಿ ಕಳ್ಳರ ಭಯ ಹೆಚ್ಚಾಗಿದೆ ಯಷ್ಟೆ? ಅದಕ್ಕೇ ಹೀಗೆ ಅಡಗಿ ಸಿಡುವುದು ಅಂತಕಾಣುತ್ತೆ. ಅವರಿಗೆ ನಿದ್ದೆ ಬಂದಕೂಡಲೇ ನೀವು ಸಪ್ಪಳಿಲ್ಲದೆ ಗೋಡೆಹಾರಿ ಹೋಗಿ ಆ ಹುಗಿದದ್ದನ್ನು ಎಬ್ಬಿಸಿಕೊಂಡು ಬಂದುಬಿಡಿ, ಯಾವಾಗಲೂ ಜಗಳಕಾಯುವವರಿಗೆ ಹೀಗಾದರೂ ಶಾಸ್ತಿಯಾದ ಹಾಗಾಗುತ್ತೆ" ಎಂದಳು ಕನಕಯ್ಯನ ಹೆಂಡತಿ.

ಧನವೆಂಬ ಮಾತು ಕೇಳಿದ ಕೂಡಲೇ ಕನಕಯ್ಯನ ನಿದ್ದೆ ಮತ್ತು ಪೂರ್ತಿ ಹೋಯಿತು. ಅನಂತಪ್ಪ ಹುಗಿದುದನ್ನು ಎತ್ತಿ ಹಾಕಿಕೊಂಡು ಬರಲು ಚಿಕ್ಕ ಪೆಟ್ಟಿಗೆಯನ್ನು ಕೂಡಾ ತೆಗೆದುಕೊಂಡು ಹೊರಟನು. ಗೋಡೆಹಾರಿ ಅನಂತಪ್ಪನ ವಠಾರಕ್ಕೆ ಬಂದು ಹರುವೇ ಓಳೀ ಹತ್ತಿರ ಹೊಸತಾಗಿ ತೋಡಲ್ಪಟ್ಟ ಹೊಂಡದ ಜಾಗವನ್ನು ಸುಲಭವಾಗಿ ಕಂಡು ಹಿಡಿದನು. ಅವನು ತಂದು ಕೊಂಡಿದ್ದ ಸಣ್ಣ ಗುದ್ದಲಿಯಿಂದ ಆ ಸ್ಥಳದ ಮಣ್ಣನ್ನು ತಿರುಗಿ ತೋಡುತ್ತಿರಲು, ಅವನ ಕಂಠಕ್ಕೆ ಏನೋ ತಣ್ಣಗೆ



ತಗಲಿತು. ಅವನು ಮೆಟ್ಟಿ ಬಿದ್ದು ತಲೆಯೆತ್ತಿ ನೋಡಿದನು. ಕರ್ರಗಿನ ದುಸ್ತಿನೊಂದಿಗೆ ಭಯಂಕರನಾಗಿ ನಿಂತ ಕಳ್ಳನವನು ! ಕನಕಯ್ಯನ ಸರ್ವಾಂಗವೂ ಬೆವತು ನಡುಗಿತು.

" ಲೋ ! ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಅಡಗಿಸಿಡಲು ಏಕೆ ಕಷ್ಟಪಡುವಿ ? ಆ ಪೆಟ್ಟಿಗೆ ನನಗೆ ಕೊಟ್ಟು, ಶುದ್ಧವಾಗಿ ಕೈ ತೊಳೆದುಕೋ " ಎಂದನು ಕಳ್ಳ ಮೊರಟು ಸ್ವರದಿಂದ.

ಕಳ್ಳನನ್ನು ನೋಡಿ ಕನಕಯ್ಯನಿಗೆ ಕೈಕಾಲುಗಳು ಆಡದೆ ಹೋದರೂ ಮೆದುಳು ಚುರುಕಾಗಿಯೇ ತಿರುಗಿತು. ಈ ಮನೆ ತನ್ನದೆಂದೇ ಈ ಕಳ್ಳ ತಿಳಿದಿದ್ದಾನೆ. ತಾನು ಧನವನ್ನು ಹುಗಿದಿಡಲು ಅಗೆಯುವುದಾಗಿ ಅಂದುಕೊಳ್ಳುತ್ತಿದ್ದಾನೆ. ಈ ಸಂದರ್ಭವನ್ನು ಉಪಯೋಗಿಸಿ ಕಳ್ಳನಿಂದ ಅನಂತಪ್ಪನ ಮನೆಯನ್ನು ಕೊಳ್ಳೆ ಹೊಡೆಯಿಸಬೇಕು. ಹೀಗಂದುಕೊಂಡು ಕನಕಯ್ಯ ಪೆಟ್ಟಿಗೆಯ ಮುಚ್ಚಳ ತೆರೆದು ಖಾಲೀಯಾಗಿರುವುದನ್ನು ಕಳ್ಳನಿಗೆ ತೋರಿಸುತ್ತ, " ನನ್ನ ಹೆಂಡ್ತಿ ಈ ಪೆಟ್ಟಿಗೆ ಹಿಡಿಯುವಷ್ಟು ಪ್ರಮಾಣದ ಹೊಂಡ ತೋಡಲು ಹೇಳಿದಳು. ನಗಗಳನ್ನೆಲ್ಲಾ ತಂದು ಅವಳು ಈ ಪೆಟ್ಟಿಗೆಯಲ್ಲಿ ಇಡುತ್ತಾಳಂತೆ. ನೀನು ಹೋಗಿ ಬಾಗಿಲು ತಟ್ಟಿ, ಅವಳ ನಗಗಳನ್ನು ಬೇಕಾದರೆ ಸುಲಿದುಕೊಂಡು ಹೋಗಯ್ಯ. ನನ್ನನ್ನು ಏನೂ ಮಾಡಬೇಡ" ಎಂದನು.

" ನನ್ನ ಸ್ವರ ಕೇಳಿದರೆ ನಿನ್ನ ಹೆಂಡತಿ ಬಾಗಿಲು ತೆಗೆಯುವಳೇ ? ನೀನೇ ನಿನ್ನ ಹೆಂಡತಿಯನ್ನೂ ಕರೆ. ಅವಳು ಬಾಗಿಲು ತೆಗೆದ ಕೂಡಲೇ ನನಗಳ ಸಮಾಚಾರ ನೋಡಿಕೊಳ್ಳುತ್ತೇನೆ " ಎಂದು ಕಳ್ಳನು ಕನಕಯ್ಯನ ಕುತ್ತಿಗೆಯ ಹತ್ತಿರ ಹಿಡಿದು ಅನಂತಪ್ಪನ ಮನೆಯ ಹಿಂದಿನ ಬಾಗಿಲ ಬಳಿಗೆ ಎಳೆದುಕೊಂಡು ಹೋದನು.

ಈಗ ಕನಕಯ್ಯನಿಗೆ ಕಳ್ಳನ ಭಯವು ದೊಡ್ಡ ಸಂತೋಷವಾಗಿ ಮಾರ್ಪಟ್ಟಿತು. ಅವನು ಗಟ್ಟಿಯಾಗಿ " ಅರುಂಧತೀ. ಬೇಗ ಬಾಯಿಲ್ಲಿ !" ಎಂದು ಕೂಗಿ ಕರೆದನು.

ಬಾಗಿಲು ತೆರೆದಕೂಡಲೇ ಅವನು ಹೆಂಡತಿಗೆ ಏನಾದರೂ ಸನ್ನೆ ಮಾಡುವನೇನೋ ಎಂದು ಸಂದೇಹಪಟ್ಟು ಕಳ್ಳನು ಕನಕಯ್ಯನನ್ನು ಬದಿಗೆ ದೂಡಿ ತಾನೇ ಬಾಗಿಲಿನ ಹತ್ತಿರ ನಿಂತನು, ಕನಕಯ್ಯ ಮತ್ತೊಂದು ಸಾರಿ ಮೊದಲಿನಂತೆಯೇ ಕೋಪದಿಂದ ಕೂಗಿ ಕರೆದನು.

ಅವನ ಕೂಗಿನಿಂದ ಅರುಂಧತಿಗೆ ಎಚ್ಚರವಾಗದಿದ್ದರೂ ಅನಂತಪ್ಪನಿಗೆ ಎಚ್ಚರವಾಯಿತು. ಅರ್ಧ ರಾತ್ರಿಯಲ್ಲಿ ಯಾರೋ ಕೂಗಿ ಕರೆಯುವುದನ್ನು ಕೇಳಿ ಅವನಿಗೆ ಬಹಳ ಕೋಪ ಬಂದಿತು. ಎರಡನೇ ಸಾರಿ ಹೊರಟ ಸ್ವರವು ಹಿಂದಿನ ಮನೆಯ ಕನಕಯ್ಯನ ಹಾಗಿರುವುದನ್ನು ತಿಳಿದು, ಅವನ

ಹೆಂಡತಿ ಗಂಡನಿಂದ ತನ್ನ ತಲೆಯೊಡೆಸುವಳೆಂದು ತನ್ನವಳು ಹೇಳಿದ ಮಾತು ನೆನಪಿಗೆ ಬಂತು. ತಾನು ಮನೆಗೆ ಬಂದುದನ್ನು ತಿಳಿದು, ಕನಕಯ್ಯ ಈ ಹೊತ್ತಿನಲ್ಲಿ ಬಂದಿದ್ದಾನೆಂದುಕೊಂಡನು.

ಅನಂತಪ್ಪ ಹಲ್ಲು ಕಡಿಯುತ್ತ, ದುಂಡುದೊಣ್ಣೆ ಎತ್ತಿಕೊಂಡು ಸಪ್ಪಳಿಲ್ಲದೆ ಬಂದು, ಹಿಂದಿನ ಬಾಗಿಲನ್ನು ತೆರೆದು, ಏನು ನಡೆಯುವುದೆಂದು ಕಳ್ಳನು ಊಹಿಸುವುದರೊಳಗೇ, ಅವನನ್ನು ಕನಕಯ್ಯ ಎಂದುಕೊಂಡು ದೊಣ್ಣೆಯಿಂದ ಅವನ ತಲೆಗೊಂದು ಬಲವಾಗಿಕೊಟ್ಟನು. ಕಳ್ಳ ಬುಡಕಡಿದಂತೆ ಧಡೀರನೆ ನೆಲಕ್ಕೆಬಿದ್ದನು.

ಆ ಪೆಟ್ಟು ತನ್ನ ತಲೆಗೇ ಬಿದ್ದಂತೆ ಕನಕಯ್ಯನೂ ಹಾರಿಬಿದ್ದನು. ಕೋಪಬಂದರೆ ಅನಂತಪ್ಪ ಎಂತಹ ಸಾಹಸಕ್ಕಾದರೂ ಹಿಂಜರಿಯುವವನಲ್ಲವೆಂದು ತಿಳಿದುಹೋಯಿತು. ಅಂಥವನೊಂದಿಗೆ ಜಗಳಮಾಡಿಕೊಂಡಿರುವುದಕ್ಕಿಂತ ಸ್ನೇಹವಾಗಿರುವುದೇ ಒಳ್ಳೆಯದೆಂದು ಅವನಿಗೆ ತೋರಿತು.

ಅಂತಲೇ ಕನಕಯ್ಯ ಇಲ್ಲದ ಸ್ನೇಹವನ್ನು ವ್ಯಕ್ತಪಡಿಸುತ್ತ, "ಭೇಷ್! ಅನಂತಪ್ಪಾ! ಈ ದೊಡ್ಡಕಳ್ಳನನ್ನು ಒಂದೇಟಿಗೆ ಮಣ್ಣು ಮುಕ್ಕಿಸಿದಿ! ನಿನಗೆ ಗ್ರಾಮಾಧಿಕಾರಿಗಳು ದೊಡ್ಡ ಬಹುಮಾನ ಕೊಡುವುದು ಖಂಡಿತ" ಎಂದನು.

ಅನಂತಪ್ಪ ಈಸಾರಿ ಕನಕಯ್ಯನ ಕಡೆಗೆ ದೊಣ್ಣೆಯನ್ನೆತ್ತಿ "ನಿನ್ನ ಗೊಡ್ಡು ಹೊಗಳಿಕೆ ನನಗೆ ಬೇಡ. ಈ ದೊಡ್ಡ ಕಳ್ಳನ ಹಿಂದೆ ನೀನೇಕೆ ನನ್ನ ಮನೇ ವಠಾರದಲ್ಲಿ?" ಎಂದು ಕೇಳಿದನು.

ಕನಕಯ್ಯ ಹೆದರಿ ನಿಜಸಂಗತಿಯನ್ನೆಲ್ಲಾ ಅನಂತಪ್ಪನಿಗೆ ಹೇಳಿ, "ಹೀಗೆ ಏಕೆ ಮಾಡಿದೆನೆಂದು ಕೇಳಬೇಡ. ಇದನ್ನೇ ಬುದ್ಧಿ ಮಣ್ಣುತಿನ್ನುವುದು ಅನ್ನುತ್ತಾರೆ. ನನ್ನನ್ನು ಕ್ಷಮಿಸು. ಇಂದಿನಿಂದ ನಾವಿಬ್ಬರೂ ಹಳೆಯ ದಿನಗಳನ್ನು ಮರೆತು ಬಿಡೋಣ" ಎಂದನು.

ಕನಕಯ್ಯ ಹೇಳಿದ ಹಾಗೆಯೇ ದೊಡ್ಡಕಳ್ಳನನ್ನು ಹಿಡಿದುಕೊಟ್ಟುದಕ್ಕೆ ಅನಂತಪ್ಪನಿಗೆ ಗ್ರಾಮಾಧಿಕಾರಿಯಿಂದ ನೂರು ವರಹಗಳು ಬಹುಮಾನ ದೊರೆಯಿತು.

ನಡೆದ ಸಮಾಚಾರವನ್ನೆಲ್ಲಾ ತಿಳಿದು ಅರುಂಧತಿ ನಗಾಡುತ್ತ," ಆ ಬೆಕ್ಕಿನ ಮರಿ ಯಾವುದೋ ರೋಗದಿಂದ ಸಾಯಂಕಾಲದಲ್ಲೇ ಸತ್ತಿತ್ತು. ಬೆಳಗಾದ ಮೇಲೆ ಕೆಲಸದವಳಿಂದ ಹೊಂಡತೆಗೆಸಿ ಹುಗಿಸೋಣ ಅಂದುಕೊಂಡೆ, ಅದರಿಂದಲೇ ನಿಮಗೆ ಬಹುಮಾನ ಸಿಕ್ಕಿತು. ಶತ್ರುವಾಗಿದ್ದವನು ಮಿತ್ರನಾದ. ಮತ್ತೆ ಸತ್ತಬೆಕ್ಕಿಗೆ ಖನನ ಮಾಡಿದ ಪುಣ್ಯ ಸುಮ್ಮನೆ ಹೋಗುತ್ತದೆಯೆ?" ಎಂದಳು.






## ೧೭

[ ಶಾಕ್ತೇಯನ ಮಹತ್ವದ ತ್ರಿಶೂಲವು ಶಿಥಿಲ ನಗರದಲ್ಲಿರುವ ಸಂಗತಿ ಸಮರಸೇನನಿಗೆ ಗೊತ್ತಾಯಿತು. ವ್ಯಾಘ್ರದತ್ತನು ಅವನ ಮೇಲೆ ದಾಳಿ ಮಾಡಿ ಬಂದೀಯಾಗಿ ಹಿಡಿದನು. ಆ ಸಮಯದಲ್ಲಿ ಶಿವದತ್ತನು ಅಲ್ಲಿಗೇ ಬರುವ ಸಂಗತಿ ವ್ಯಾಘ್ರದತ್ತನಿಗೆ ತಿಳಿಯಿತು. ಕೂಡಲೇ ಅವನು ಬಂದಿಯಾದ ಸಮರಸೇನನೊಂದಿಗೆ ಓಡ ತೊಡಗಿದನು. ಅವನ ಭಟರು ಕೆಲವರು ಶಿವದತ್ತನನ್ನು ತಡೆಯಲು ತೊಡಗಿದರು. ]

ವೀರಾಧಿವೀರನಾದ ಶಿವದತ್ತನು ತನ್ನ ಅನುಚರರೊಂದಿಗೆ ಅದೇ ಶಿಥಿಲ ನಗರವನ್ನು ಪ್ರವೇಶಿಸಿರುವುದನ್ನು ತಿಳಿದು ವ್ಯಾಘ್ರದತ್ತನಿಗೆ ಎಷ್ಟು ಭಯವಾಯಿತೋ, ಅಷ್ಟೇ ಉತ್ಸಾಹವು ಸಮರಸೇನನಲ್ಲಿ ಉಂಟಾಯಿತು. ಆ ಶಿವದತ್ತನು ಸ್ವಲ್ಪ ಮೊದಲು ಬಂದಿರಬಾರದೆ ? ಆಗ ತಾನು ಈ ದುಷ್ಟ ವ್ಯಾಘ್ರದತ್ತನ ಕೈಗೆ ಬಂದಿಯಾಗಿ ಸಿಗುತ್ತಿದ್ದಿಲ್ಲವಷ್ಟೆ ? ಈ ವ್ಯಾಘ್ರದತ್ತನನ್ನು ಸಂಹರಿಸಿ ಶಾಕ್ತೇಯನ ಮಹಾ ತ್ರಿಶೂಲವನ್ನು ಕೂಡಾ ತನ್ನದಾಗಿ ಮಾಡಿಕೊಳ್ಳಬಹುದಿತ್ತು. ಈಗ ಕಾಲ ಮೀರಿ ಹೋಯಿತು. ಇನ್ನೆಲ್ಲಾ ಅದೃಷ್ಟದ ಕೈಯಲ್ಲಿದೆ. ಓಡುತ್ತಿರುವ ಸಮರಸೇನನ ಮನಸ್ಸಿನಲ್ಲಿ ಹೀಗೆ ಆಲೋಚನೆಯ ಓಟವೂ ಸಾಗುತಿತ್ತು.

ತನ್ನನ್ನು ಒಮ್ಮೆಗೇ ಕೊಲ್ಲಲು ಹೆದರಿದ ಈ ವ್ಯಾಘ್ರದತ್ತನು ತನ್ನನ್ನು ಎಳೆದುಕೊಂಡು ಓಡುತ್ತ ಏನು ಮಾಡಬೇಕೆಂದಿದ್ದಾನೆ ? ನಿಜ ನೋಡಿದರೆ ಈಗ ತನ್ನನ್ನು ಕೊಲ್ಲುವುದು ವ್ಯಾಘ್ರದತ್ತನಿಗೆ ಸುಲಭ. ಆದರೂ ಏನೋ ಕಾರಣದಿಂದ ಕೊಲ್ಲದಿದ್ದಾನೆ. ಆ ಕಾರಣ ತನಗೆ ಸಾಧಕವಾಗಿದ್ದೀತೆ ? ಇಂತಹ ಆಪತ್ತಿನ ಸಮಯದಲ್ಲಿ ಚತುರ್ನೇತ್ರನು ಅಲ್ಲಿಗೆ




ಬಂದರೆ ಒಳ್ಳೆಯದಿತ್ತು. ಅವನೆಲ್ಲಿದ್ದಾನೋ ಏನೋ? ತನ್ನ ಸಂಗತಿಯನ್ನು ಅವನಿಗೆ ತಿಳಿಸುವವರಾರು?

ಹೀಗೆ ಸಮರಸೇನನ ಮನಸ್ಸಿನಲ್ಲಿ ಯೋಚನೆಗಳು ತಿರುಗುತ್ತಿರಲು, ವ್ಯಾಘ್ರದತ್ತನ ಮನಸ್ಸಿನಲ್ಲಿಯೂ ತೀವ್ರಾಲೋಚನೆ ನಡೆದಿತ್ತು. ಯಾವುದು ನಿಜವೆಂದು ತಿಳಿಯುವವರೆಗೂ ಸಮರಸೇನನನ್ನು ಕೊಲ್ಲುವುದು ಕ್ಷೇಮವಲ್ಲವೆಂದು ನಿಶ್ಚಯಿಸಿಕೊಂಡಿದ್ದನು. ಸಾಧ್ಯವಾದರೆ ಸಮರಸೇನನೊಂದಿಗೆ ಸ್ನೇಹವನ್ನು ನಟಿಸಬೇಕೆಂದು ಅವನಿಗೆ ತೋರತೊಡಗಿತು, ವೀರನಾದ ಸಮರಸೇನನನ್ನು ಒಡಂಬಡಿಸಿಕೊಂಡು, ಬಲಿಷ್ಠನಾದ ಶಿವದತ್ತನನ್ನು ಮೊದಲು ಕೊಂದು ಬಿಡಬೇಕು. ಎಲ್ಲಕ್ಕಿಂತ ಮೊದಲು ಆಗಬೇಕಾದುದು ಆ ಶಿವದತ್ತನ ಮರಣವೇ. ಈಗ ಸಮರಸೇನನೊಂದಿಗೆ ಸ್ನೇಹಕ್ಕೆ ಹೇಗೆ ಪ್ರಾರಂಭಿಸುವುದು? ವ್ಯಾಘ್ರದತ್ತನಿಗೆ ಈಗ ಎರಡು ಸಂದೇಹಗಳು: ಶಿವದತ್ತನಿಗೆ ಶಾಕ್ತೇಯನ ತ್ರಿಶೂಲವು ಯಾವ ಸ್ಥಳದಲ್ಲಿ ಅಡಗಿದೆ ಎಂಬುದು ಗೊತ್ತಿದೆಯೆ? ಚತುರ್ನೇತ್ರನು ತನ್ನ ಮಿತ್ರನೆಂದು ಸಮರಸೇನನು ಹೇಳಿದುದರಲ್ಲಿ ನಿಜವೆಷ್ಟು? ಈ ಎರಡು ಅನುಮಾನಗಳಿಂದ ವ್ಯಾಘ್ರದತ್ತನು ಓಡುತ್ತಿರಲು, ಅವನ ಹಿಂದೆಯೇ ಉಳಿದವರೂ ಓಡುತ್ತಿದ್ದರು. ಗುಡ್ಡದಾರಿಯ ಏರುತಗ್ಗುಗಳಲ್ಲಿ ಓಡುತ್ತಿರುವಾಗ, ಶಿವದತ್ತನ ಅನುಚರರೊಂದಿಗೆ ತನ್ನ ಭಟರು ಇನ್ನೂ ಹೋರಾಡಿಕೊಂಡಿರುವರೆಂದು, ಕೇಳಿ ಬರುವ ಅವರ ಶಬ್ದಗಳಿಂದ ಗೊತ್ತಾಗುತ್ತಿದ್ದಿತು. ಆದುದರಿಂದ ಶಿವದತ್ತನು ಥಕ್ಕನೆ ತನ್ನನ್ನು ಬೆಂಬತ್ತಲಾಗದುದನ್ನು ತಿಳಿದು ವ್ಯಾಘ್ರದತ್ತನಿಗೆ ಸ್ವಲ್ಪ ಧೈರ್ಯ ಬಂತು.

ಅವನು ಓಡುತ್ತಾ ಸಮರಸೇನನನ್ನು ನೋಡಿ, "ಸಮರಸೇನಾ, ಬಹಳ ದೂರ ಬಂದಿದ್ದೇವೆ. ಇಲ್ಲಿ ಸ್ವಲ್ಪ ದಣಿವಾರಿಸಿಕೊಳ್ಳೋಣ. ನನ್ನ ವೀರ ಭಟರು ಶತ್ರುಗಳನ್ನು ಮುಂದೆ ಬರಲು ಬಿಡುವುದಿಲ್ಲ." ಎಂದನು.

ಅವನ ಮಾತಿನಲ್ಲಿರುವ ಸೌಮ್ಯತೆಯನ್ನು ನೋಡಿ ಸಮರಸೇನನು ಆಶ್ಚರ್ಯಪಟ್ಟನು. ಬಂದಿಯಾಗಿರುವ ತನ್ನನ್ನು ಮಿತ್ರನ ರೀತಿಯಲ್ಲಿಯೂ, ತನ್ನ ಮಿತ್ರನಾದ ಶಿವದತ್ತನನ್ನು ಶತ್ರುವಿನ ರೀತಿಯಲ್ಲಿಯೂ ಸೂಚಿಸುವಂತಿದೆ ಇವನ ಮಾತು!

"ವ್ಯಾಘ್ರದತ್ತಾ, ನನಗೆ ನೀನು ಧೈರ್ಯ ಹೇಳುವುದರಲ್ಲಿ ಅರ್ಥವೇನಿಲ್ಲ. ಆ ಶಿವದತ್ತನು ಮೊದಲಿನಿಂದಲೂ ನನಗೆ ಸ್ನೇಹಿತನು. ಅವನನ್ನು ಕುರಿತು ಹೆದರಬೇಕಾದ್ದು ಅವನ ಶತ್ರುವಾದ ನೀನೇ ಹೊರತು ನಾನಲ್ಲ." ಎಂದನು ಸಮರಸೇನ.

ಓಡಿದುದರಿಂದ ತುಂಬಾ ದಣಿದು ಹೋದ ವ್ಯಾಘ್ರದತ್ತನು ಒಂದು ಮರವನ್ನು ಒರಗಿ ಕುಳಿತುಕೊಳ್ಳುತ್ತ, ಸಮರಸೇನನ ಮಾತು ಕೇಳಿ, ತನ್ನ ಆತಂಕಗಳು ಇವನಿಗೆ ತಿಳಿಯಿತೇನೋ ಎಂದು ನಿರ್ವಿಣ್ಣನಾದನು. ಕೂಡಲೇ ಏನು ಉತ್ತರ ಹೇಳಬೇಕೆಂದು

ಅವನಿಗೆ ತಿಳಿಯಲಿಲ್ಲ. ಹೇಗಾದರೂ ಸರಿಯೆ, ಸಮರಸೇನನನ್ನು ತನ್ನ ಪಕ್ಷಕ್ಕೆ ತಿರುಗಿಸಿಕೊಳ್ಳಬೇಕೆಂಬ ಭಾವನೆ ಮಾತ್ರ ಬಲವಾಗಿದ್ದಿತು.

"ಸಮರಸೇನಾ, ನಿನಗೆ ಶಿವದತ್ತನನ್ನು ಕುರಿತು ಅಷ್ಟೇನೂ ತಿಳಿದಂತಿಲ್ಲ. ಅದು ಹಾಗಿರಲಿ. ಈಗ ನಾವಿಬ್ಬರೂ ವಿರೋಧಿಗಳಾಗಿರುವುದರಿಂದ ಇಬ್ಬರೂ ನಷ್ಟಪಡಬೇಕಾಗಿರುತ್ತೆ. ಇಕೋ, ನಾನೀಗ ನಿನ್ನನ್ನು ಬಂಧಮುಕ್ತ ಮಾಡುತ್ತೇನೆ. ಇದಕ್ಕೆ ಮುಖ್ಯಕಾರಣ, ನಿನ್ನ ವೀರ ಧೀರ ತನಗಳು. ನಿನ್ನ ಶೌರ್ಯವು ನನಗೆ ತುಂಬಾ ಹಿಡಿಸಿತು. ನೀನು ನನಗೆ ಸರಿಸಮಾನ ನಾದವನು. ಆ ಮೇಲೆ ಮಿತ್ರರಾಗಿ ನಾವು ಎಲ್ಲ ಸಂಗತಿಯನ್ನೂ ಮಾತಾಡಿಕೊಳ್ಳೋಣ." ಎಂದನು.

ವ್ಯಾಘ್ರದತ್ತನ ಆಜ್ಞೆಯಿಂದ ಇಬ್ಬರು ಭಟರು ಮುಂದೆ ಬಂದು ಸಮರಸೇನನ ಕೈಗಳ ಕಟ್ಟನ್ನು ಬಿಚ್ಚಿ ಬಿಟ್ಟರು. ಸಮರಸೇನನು ಕೂಡಾ ತಾನಿರುವ ಈ ಸಂಕಟದ ಪರಿಸ್ಥಿತಿಯಲ್ಲಿ ವ್ಯಾಘ್ರದತ್ತನನ್ನು ಹೇಗೋ ಒಂದು ವಿಧದಲ್ಲಿ ತೃಪ್ತಿಗೊಳಿಸುವುದೇ ತನಗೆ ಒಳ್ಳೆಯ ದೆಂದು ನಿಶ್ಚಯಿಸಿಕೊಂಡನು. ಅವನಿಗೀಗ ತನ್ನ ಭವಿಷ್ಯತ್ತಿನಲ್ಲಿ ಒಂದು ಬಗೆಯ ನಂಬುಗೆ ಯುಂಟಾಗಿತ್ತು.

"ವ್ಯಾಘ್ರದತ್ತಾ, ಶಾಕ್ತೇಯನ ಅಪೂರ್ವ ಶಕ್ತಿ ಯುಳ್ಳ ತ್ರಿಶೂಲವನ್ನು ಕುರಿತು ನಮಗಿಬ್ಬರಿಗೂ ಗೊತ್ತಿದೆ. ಅದು ಎಲ್ಲಿರುವುದೆಂದೂ, ಅದನ್ನು ಕೈಯಲ್ಲಿ ಹಿಡಿದವರಿಗೆ ವಶವಾಗುವ ಭೋಗಭಾಗ್ಯಗಳ ಸಮಾಚಾರ ಕೂಡಾ ನಮ್ಮಿಬ್ಬರಿಗೂ ಗೊತ್ತಿದೆ. ಅದಿರಲಿ. ಈ ಭಯಂಕರ ದ್ವೀಪದಲ್ಲಿ ಆ ಶೂಲವು ನಿನ್ನ ಕೈಗೆ ಸಿಕ್ಕಿದ ಮರುಕ್ಷಣದಲ್ಲಿ ನೀನು ಪಡೆಯುವ ಲಾಭವೇನೆಂದು ಹೇಳಬಲ್ಲೆಯಾ ?" ಎಂದು ಸಮರ ಸೇನನು ಕೇಳಿದನು.

ಈ ಪ್ರಶ್ನೆ ವ್ಯಾಘ್ರದತ್ತನನ್ನು ತಳಮಳಗೊಳಿಸಿತು. ಒಂದು ವೇಳೆ ಧನರಾಶಿಯಿಂದ ತುಂಬಿದ ನಾವೆಯು ಸಂಗತಿ ಸಮರಸೇನನಿಗೆ ಗೊತ್ತಿಲ್ಲವೇನೋ ಎಂಬ ಅನುಮಾನವು ಅವನಿಗಾಯಿತು. ಅದು ಬಹಳ





ಹೊತ್ತುನಿಲ್ಲಲಿಲ್ಲ. ಸಮರಸೇನನು ಈ ದ್ವೀಪಕ್ಕೆ ಬಂದು ಇಷ್ಟೆಲ್ಲಾ ಬನ್ನಬಡುವುದು ಆ ಧನರಾಶಿಗಾಗಿಯೇ ಎಂದು ಅವನಿಗೆ ತೋರಿತು. ಆದುದರಿಂದ ತಾನು ಆ ನಾವೆಯ ಸಮಾಚಾರ ಹೇಳುವುದರಿಂದ ತನಗಾಗುವ ನಷ್ಟವೇನಿಲ್ಲ ಎಂಬ ಧೈರ್ಯ ಬಂದಿತು ವ್ಯಾಘ್ರದತ್ತನಿಗೆ.

"ಸಮರಸೇನಾ, ಮುಖ್ಯ ವಿಷಯ ಹೇಳುತ್ತೇನೆ ಕೇಳು. ಸಮುದ್ರದಲ್ಲಿ ಧನರಾಶಿಯಿಂದ ತುಂಬಿದ ನಾವೆಯೊಂದಿರುವ ಸಂಗತಿ ನಮಗಿಬ್ಬರಿಗೂ ಗೊತ್ತಿದೆ. ಇದರಲ್ಲಿ ನಾವು ಒಬ್ಬರನ್ನೊಬ್ಬರು ಮೋಸಪಡಿಸಬೇಕಾಗಿಲ್ಲ. ಈ ಸಂದರ್ಭದಲ್ಲಿ ನಾನು ಹೇಳುವ ವಿಷಯವನ್ನು ಕೇಳಿ, ಚೆನ್ನಾಗಿ ಆಲೋಚಿಸಿ ಉತ್ತರ ಕೊಡು. ನಾವಿಬ್ಬರೂ ಸೇರಿ ಆ ನಾವೆಯನ್ನು ವಶಪಡಿಸಿಕೊಂಡು, ಅದರಲ್ಲಿರುವ ಧನವನ್ನು ಇಬ್ಬರೂ ಸಮಪಾಲಾಗಿ ಪಂಚಿಕೊಳ್ಳೋಣ. ಇದಕ್ಕೆ ನಿನ್ನ ಅಡ್ಡಿ ಏನೂ ಇಲ್ಲವಷ್ಟೆ? ಈಗಲೇ ನಿನ್ನ ಅಭಿಪ್ರಾಯ ಹೇಳಿಬಿಡು. ಆ ಮೇಲೆ ತಕರಾರು ಮಾಡುವುದು ಒಳ್ಳೆಯದಲ್ಲ" ಎಂದನು ವ್ಯಾಘ್ರದತ್ತ.

"ನೀನು ಎಲ್ಲಿಗೋ ಹೋಗಿ ಮಾತಾಡುತ್ತೀ. ಆ ಸಂಗತಿ ನಮಗಿಂತಲೂ ಮೊದಲು ತಿಳಿದುಕೊಂಡು ಅದಕ್ಕಾಗಿಯೇ ಬಾಯಿ ಬಿಟ್ಟುಕೊಂಡಿರುವ ಆ ಮಾಂತ್ರಿಕರ ಸಮಾಚಾರವೇನೆಂದು ಹೇಳು." ಎಂದು ಸಮರಸೇನನು ನಗುತ್ತಾಹೇಳಿದನು.

"ಇನ್ನು ಸ್ವಲ್ಪ ಹೊತ್ತಿನೊಳಗೆ ಅವರ ಪ್ರಶ್ನೆಯೇ ತೀರಿಹೋಗುತ್ತದೆ. ಒಂದು ಸಾರಿ ಆ ಶಾಕ್ತೇಯನ ಅದ್ಭುತ ಶಕ್ತಿಯ ತ್ರಿಶೂಲವು ನಮ್ಮ ಕೈಗೆ ಸಿಕ್ಕಿತೆಂದರೆ ಲೋಕದಲ್ಲಿರುವ ಯಾವ ಶಕ್ತಿಯೂ, ಅದೆಂಥ ದೊಡ್ಡ ಮಂತ್ರಶಕ್ತಿ ಯಾದರೂ ನಮ್ಮ ಇದಿರು ನಿಲ್ಲಲಾರದೆಂದು ಗಟ್ಟಿಯಾಗಿ ನಂಬಬಹುದು." ಎಂದನು ವ್ಯಾಘ್ರದತ್ತ.

ಆ ಮಾತು ಕೇಳಿ ಸಮರಸೇನನು ಗಟ್ಟಿಯಾಗಿ ಬಾಯಿ ತೆರೆದು ನಕ್ಕನು. ಆ ನಗುವಿನ ಕಾರಣ ತಿಳಿಯದೆ ವ್ಯಾಘ್ರದತ್ತನು ಆಶ್ಚರ್ಯ ಪಡುತ್ತ ಸಮರಸೇನನನ್ನು ಅನುಮಾನದಿಂದ ಅದೇನು ಹೇಳುವನೋ ಎಂದು ನೋಡಿದನು.

"ಆ ಶಾಕ್ತೇಯನ ತ್ರಿಶೂಲವು ಈ ನಿಮಿಷದಲ್ಲಿ ಶಿವದತ್ತನ ಕೈಗೆ ಸಿಗುವ ಹಾಗಿದೆ ಗೊತ್ತೋ? ಮಹಾ ದುಡುಕುಗಾರ ನೀನು!" ಎಂದನು ಸಮರಸೇನ.

"ಸಾಧ್ಯವಿಲ್ಲ. ಶಿವದತ್ತನಿಗೆ ಈ ಶಿಥಿಲ ನಗರದಲ್ಲಿ ಆ ತ್ರಿಶೂಲವಿರುವುದೆಂದು ಗೊತ್ತಿದ್ದರೂ, ಅದು ಅಡಗಿರುವ ಪ್ರತ್ಯೇಕ ಸ್ಥಳವು ಯಾವುದೆಂದು ತಿಳಿಯದು. ತಿಳಿಯಲು ಸಾಧ್ಯವೂ ಇಲ್ಲ. ಅದಿರುವ ಜಾಗದ ಗುರುತಿನ ಪಟವು ನನ್ನ ಕೈಯಲ್ಲಿದೆ. ಆನೆಗಳ ವನದ ವಿಷ ವೃಕ್ಷವೆಂದ ಮಾತ್ರಕ್ಕೆ, ಪಟದ ಗುರುತುಗಳ ಸಹಾಯವಿಲ್ಲದೆ ಯಾರೂ ಅದನ್ನು ಹುಡುಕಿ ಎತ್ತಿಕೊಳ್ಳುವಂತಿಲ್ಲ. ಅದಕ್ಕೆ ಸಂಬಂಧಿಸಿದ ಪಟವು

ಇದೊಂದೇ ಇರುವುದು ಪ್ರಪಂಚದಲ್ಲಿ" ಎಂದನು ವ್ಯಾಘ್ರದತ್ತ ಧೈರ್ಯದಿಂದ.

ಆ ಮರುಕ್ಷಣದಲ್ಲೇ ಸುತ್ತುಮುತ್ತಲಿನ ಪ್ರದೇಶವು ಮಾರ್ಮೊಳಗುವಂತೆ, ಏಕಾಕ್ಷಿ ಮಾಂತ್ರಿಕನ ಗೂಢಚಾರಿ ಕಪಾಲನ ಕರ್ಕಶ ಸ್ವರವು ಕೇಳಿಸಿತು.

ಆ ಶಬ್ದ ಕೇಳಿದ ಕೂಡಲೇ ಸಮರಸೇನನು ಬೆಚ್ಚಿ ಬಿದ್ದವನಂತೆ ಹಾರಿ ಎದ್ದು, "ಅಯ್ಯೋ ! ಸರ್ವನಾಶವೇ ಬಂತು. ಇದು ಮಹಾಮಾಂತ್ರಿಕ ಚತುರ್ನೇತ್ರನ ಬಂಟ ಕಪಾಲನ ಧ್ವನಿ ! ನೀವೆಲ್ಲಾ ಬೇಗನೇ ಓಡಿ ಹೋಗಿ ಯಾವ ಗುಹೆಯಲ್ಲಾದರೂ ತಲೆ ಮರೆಸಿಕೊಳ್ಳಿ ! ಅವನ ಕೊಳ್ಳಿ ಕಣ್ಣಿಗೆ ಬಿದ್ದರೆ ತೀರೇ ಹೋಯಿತು! ಬೇಗ !ಬೇಗ !" ಎಂದನು ಸಮರಸೇನ.

ವ್ಯಾಘ್ರದತ್ತನು ಅನುಮಾನದಿಂದ ಅವನನ್ನು ನೋಡಿ, "ಚತುರ್ನೇತ್ರನು ನಿನ್ನ ಸ್ನೇಹಿತನೆಂದು ಹೇಳಿದೆಯಲ್ಲಾ ? ಹಾಗಿರುವಾಗ ಅವನಿಂದ ನಮಗೇನು ಭಯಬಂದೀತು ? ಏಕೆ ಹೀಗೆ ಹೆದರಿ ಚಡಪಡಿಸುವೆ ? ಹೆದರಿ ಓಡುವ ಅಗತ್ಯ ವೇನಿದೆ ? " ಎಂದು ಕೇಳಿದನು.

ಇನ್ನು ಇವನಿಗೆ ಉತ್ತರ ಕೊಡುತ್ತ ತಡ ಮಾಡಿದರೆ ತನಗೆ ಅಪಾಯ ಬರುತ್ತದೆಂದುಕೊಂಡನು ಸಮರಸೇನ. ಈ ಕಪಾಲನು ಏಕಾಕ್ಷಿ ಮಾಂತ್ರಿಕನ ಬಂಟನೆಂದು ಅವನಿಗೆ ಗೊತ್ತು. ಮಹಾ ಮಾಂತ್ರಿಕನಾದ ಚತುರ್ನೇತ್ರನಿಗೆ ಶತ್ರುವಾಗಿ ಏಕಾಕ್ಷಿ ಮಾಂತ್ರಿಕನೊಬ್ಬನಿರುವನೆಂದು ವ್ಯಾಘ್ರದತ್ತನಿಗೆ ತಿಳಿಯುವುದು ಒಳ್ಳೆಯದಲ್ಲವೆಂದುಕೊಂಡೇ ಸಮರ ಸೇನನು ಆ ವಿಧವಾಗಿ ವ್ಯಾಘ್ರದತ್ತನೊಂದಿಗೆ ಸುಳ್ಳು ಹೇಳಿದ್ದನು. ಈ ಬಿಸಿಯಲ್ಲೇ ವ್ಯಾಘ್ರದತ್ತನನ್ನು ಹದಬರಿಸಿ ಬಿಡಬೇಕೆಂದುಕೊಂಡನು.

"ವ್ಯಾಘ್ರದತ್ತಾ ! ಹೀಗಲ್ಲಾ ಕೇಳುತ್ತಾ ಹೊತ್ತು ಕಳೆಯಬೇಡ. ನನ್ನ ಜತೆಯಲ್ಲಿ ನೀನು ಚತುರ್ನೇತ್ರನ ಕಣ್ಣಿಗೆ ಬೀಳುವುದು ಕ್ಷೇಮವಲ್ಲ. ಅವನು ದುಡುಕಿ




ನಿನ್ನನ್ನು ಹಾರಿಸಿ ಬಿಡಲಾರನೆಂದು ಏನು ನಂಬುಗೆ? ಮೊದಲು ನಾನು ಅವನ ಹತ್ತಿರ ಮಾತಾಡಿದ ಮೇಲೆ ನಿನಗೆ ಅವನೊಂದಿಗೆ ಪರಿಚಯಮಾಡಿಸುತ್ತೇನೆ. ಇದೆಲ್ಲಾ ನಿಮ್ಮೆಲ್ಲರ ಒಳಿತಿಗಾಗಿಯೇ ಹೇಳುತ್ತಿದ್ದೇನೆ. ಮೊದಲು ನೀವೆಲ್ಲ ಓಡಿಹೋಗಿ ಯಾವ ಗುಹೆ ಯೊಳಗಾದರೂ ಅಡಗಿಕೊಳ್ಳಿರಿ" ಎಂದು ಸಮರ ಸೇನನು ಅವಸರಪಡಿಸಿದನು.

ಸಮರಸೇನನು ಮಾತಾಡುತ್ತಿದ್ದಾಗಲೇ "ಹೇ ! ಕಾಪಾಲಾ ! ಕಾಲಭುಜಂಗಾ !" ಎಂಬ ಏಕಾಕ್ಷೀ ಮಾಂತ್ರಿಕನ ಕಂಠ ಸ್ವರವು ಭಯಂಕರವಾಗಿ ಮೊಳಗಿತು. ಆ ಧ್ವನಿಯನ್ನು ಕೇಳಿ ಬೆರಗಾದ ವ್ಯಾಘ್ರದತ್ತನೂ ಅವನ ಭಟರೂ ಅಲ್ಲಿಂದ ಒಮ್ಮೆಗೇ ಓಡ ತೊಡಗಿದರು. ಅದೇ ಸಂಧಿಯಲ್ಲಿ ಸಮರಸೇನನೂ ಕೂಡಾ ಮತ್ತೊಂದು ದಿಕ್ಕಿಗೆ ಓಡಿದನು.

ಸ್ವಲ್ಪ ದೂರ ಓಡಿ ಹಿಂದಿರುಗಿ ನೋಡಿದ ವ್ಯಾಘ್ರದತ್ತನಿಗೆ ಸಮರಸೇನನು ತಮ್ಮೊಂದಿಗೆ ಬಾರದೆ

ಅಲ್ಲಿಯೂ ನಿಲ್ಲದೆ ಎತ್ತಲೋ ಓಡುವುದನ್ನು ನೋಡಿ ಅನುಮಾನವಾಯಿತು. ತನ್ನ ಸ್ನೇಹಿತನೆಂದು ಹೇಳಿದ ಚತುರ್ನೇತ್ರನ ಶಬ್ದ ಕೇಳಿ ಅವನೇಕೆ ಹಾಗೆ ಹೆದರಿ ಓಡುತ್ತಾನೆ ? ಹಾಗಾದರೆ ಅವನು ಹೇಳಿದ್ದೆಲ್ಲವೂ ಸುಳ್ಳೇ. ಇದರಲ್ಲೇನೋ ಮೋಸವಿರಬೇಕು. ಸಮರಸೇನನು ದೊಡ್ಡ ಸುಳ್ಳುಗಾರನೆಂದು ವ್ಯಾಘ್ರುದತ್ತನು ಅಂದುಕೊಂಡು ಹಲ್ಲು ಕಡಿದನು.




ಅಷ್ಟರಲ್ಲೇ ಅತ್ತ ಬಂದ ಏಕಾಕ್ಷಿ ಮಾಂತ್ರಿಕನು ವ್ಯಾಘ್ರುದತ್ತನನ್ನು ನೋಡಿ ಬಿಟ್ಟನು. ಅವನು ಹಲ್ಲು ಕಡಿಯುತ್ತ, ಕಣ್ಣು ತಿರುಗಿ ಸುತ್ತ, "ಯಾರವನು ? ಏನಿದು ? ಲೋ ! ಕಾಲಭುಜಂಗಾ ! ಕಪಾಲಾ ! ಆ ಚತುರ್ನೇತ್ರನ ಭೃತ್ಯರನ್ನು ಬಿಡಬೇಡೀ ! ಸುತ್ತು ಮುತ್ತಿರಿ ! ಇವರನ್ನೆಲ್ಲ ನೆತ್ತಿಯಿಂದ ಸೀಳುತ್ತೇನೆ ! ಹೇ ! ಧೂರ್ತರೇ ! ನಿಲ್ಲಿರಲ್ಲೇ !" ಎಂದು ಭೀಕರವಾಗಿ ಕೂಗಿದನು.

ಇವನು ಚತುರ್ನೇತ್ರನಲ್ಲವೆಂದು ವ್ಯಾಘ್ರುದತ್ತನಿಗೆ ಕೂಡಲೇ ಗೊತ್ತಾಯಿತು. ಇವನು ಸಮರಸೇನನ ಸ್ನೇಹಿತನಲ್ಲ. ಆದಕ್ಕೇ ತನ್ನನ್ನು ಮೋಸದಿಂದ ಇವನ ಹಿಡಿತಕ್ಕೆ ಸಿಕ್ಕಿಸಿ ಅವನು ತಪ್ಪಿಸಿಕೊಂಡಿದ್ದಾನೆ. ಈಗ ತಾನೇನು ಮಾಡಬೇಕು ? ಈ ಮಾಂತ್ರಿಕನು ಅಂದುಕೊಂಡ ಹಾಗೆ ತಾನು ಚತುರ್ನೇತ್ರನ ಅನುಚರನಲ್ಲವೆಂದೂ ಅವನ ಶತ್ರು ಪಕ್ಷದವನೆಂದೂ ಹೇಳಿ ನಂಬಿಸಬೇಕು. ಇವನಿಗೆ ಚತುರ್ನೇತ್ರನು ಪರಮ ಶತ್ರುವೆಂದು ತಿಳಿಯುತ್ತದೆ. ಆದಕ್ಕೆ ತಕ್ಕಂತೆ ಮಾತಾಡದೆ ಬೇರೆ ದಾರಿ ಇಲ್ಲ.

ಏಕಾಕ್ಷಿಯ ಆಜ್ಞೆಯನ್ನು ಕೇಳಿದ ಕೂಡಲೇ ಅವನ ಬಂಟತನ ಮಾಡುವ ಕಪಾಲವೂ, ಕಾಲಭುಜಂಗವೂ ವ್ಯಾಘ್ರುದತ್ತನನ್ನೂ, ಅವನ ಭಟರನ್ನೂ ಚಲಿಸಲು ಬಿಡದೆ ಮುತ್ತಿ,ಸುತ್ತ ತೊಡಗಿದುವು.ಕಾಲಭುಜಂಗವೂ ಕೋರೆ ಹಲ್ಲುಗಳನ್ನು ಚಾಚಿ ಭುಸುಗುಡುತ್ತ ಅವರ ಸುತ್ತಲೂ ತಿರುಗುತಿತ್ತು. ಕಪಾಲವು ಕಿರಿಚಿಕೊಂಡು ಅವರ ತಲೆಗಳ ಮೇಲೆ ಹಾರುತ್ತ ಇಳಿಯುತ್ತ ಕುಟ್ಟುತ್ತ ಸುತ್ತುತಿತ್ತು. ಅದರ ಕಾಟದಿಂದ ಎಲ್ಲರೂ ನಿಂತಲ್ಲೇ ಹಾರಿ ಬೀಳುತ್ತ ಕಿರುಚುತ್ತಿದ್ದರು.

ಏಕಾಕ್ಷಿ ಗಹಗಹಿಸಿ ನಗುತ್ತ ಅವರ ಸಮೀಪಕ್ಕೆ ಬಂದನು. ವ್ಯಾಘ್ರುದತ್ತ ಮೊದಲಾದವರನ್ನು ಸರಿಯಾಗಿ ನೋಡುವಾಗ ಅವನ ನಗು ನಿಂತಿತು. ಸಮರಸೇನನೂ, ಅವನ ಕಡೆಯ ಸೈನಿಕರೂ ಇವರಲ್ಲವೆಂದು ತಿಳಿದು, ಆಶ್ಚರ್ಯದಿಂದ ಪ್ರಶ್ನಾರ್ಥಕವಾಗಿ ಅವನ ಹುಬ್ಬುಗಳು ಮೇಲೇರಿದುವು.

"ಯಾರು ನೀವೆಲ್ಲ ? ನಾನು ಅಂದುಕೊಂಡ ದುಷ್ಟನ ಕಡೆಯುವರು ನೀವಲ್ಲವೆಂದು ಕಾಣುತ್ತದೆ. ಹಾಗಾದರೆ ಕುಂಭಾಂಡನ ಕಡೆಯವರೇನು ?" ಎಂದು ಏಕಾಕ್ಷಿ ವ್ಯಾಘ್ರುದತ್ತನನ್ನು ಕೇಳಿದನು.

"ನನ್ನ ಹೆಸರು ವ್ಯಾಘ್ರುದತ್ತನೆಂದು. ನಾನು ಈ ವ್ಯಾಘ್ರುಮಂಡಲದ ರಾಜ. ನೀವು ಹೇಳಿದ

ಕುಂಭಾಂಡನು ಯಾರೆಂದು ನಮಗೆ ಗೊತ್ತಿಲ್ಲ" ಎಂದನು ವಿನಯದಿಂದ ವ್ಯಾಘ್ರದತ್ತ.

"ಹಾಗಾದರೆ ನೀನು ಈ ಸಾವಿನಕಣಿವೆಗೆ ಹೊರಗಿನಿಂದ ಬಂದವನಲ್ಲವೆಂದು ಕಾಣುತ್ತದೆ." ಎಂದನು ಏಕಾಕ್ಷಿಮಾಂತ್ರಿಕ.

"ನೀವು ಹೇಳಿದ ಸಾವಿನಕಣಿವೆ ಎಲ್ಲಿದೆ ಎಂದೂ ನನಗೆ ಗೊತ್ತಿಲ್ಲ. ಬಹುಶಃ ಅದಕ್ಕೆ ನಾವು ಮತ್ತೊಂದು ಹೆಸರಿಟ್ಟು ವ್ಯವಹರಿಸುತ್ತೇವೋ ಏನೋ ?" ಎಂದನು ವ್ಯಾಘ್ರದತ್ತ.

"ಹಾಗಾದರೆ ನಿನಗೆ ಸಮರಸೇನ ಎಂಬ ಹೆಸರುಳ್ಳವನು ಗೊತ್ತಿದೆಯೆ ? " ಎಂದು ಏಕಾಕ್ಷಿ ಪ್ರಶ್ನಿಸಿದನು.

ಈ ಪ್ರಶ್ನೆಯನ್ನು ಕೇಳಿ ವ್ಯಾಘ್ರದತ್ತನಿಗೆ ಪರಿಸ್ಥಿತಿ ಸುಮಾರಾಗಿ ಅರ್ಥವಾಯಿತು. ಈ ಮಾಂತ್ರಿಕನು ಸಮರಸೇನನಿಗೆ ಪ್ರಬಲ ವಿರೋಧಿಯಾಗಿದ್ದಾನೆ. ಈಗ ಸಮರಸೇನನ ಮೇಲೆ ಹಗೆ ತೀರಿಸಿಕೊಳ್ಳಲಿಕ್ಕೆ ತನಗೆ ಸಂದರ್ಭ ಬಂದಿದೆ. ಇದನ್ನು ಕಳೆದುಕೊಳ್ಳಬಾರದು ಎಂದು ವ್ಯಾಘ್ರದತ್ತನಿಗೆ ತೋರಿತು.

"ಮಹಾಮಹಿಮರಾದ ಮಾಂತ್ರಿಕ ಶ್ರೇಷ್ಠರೇ ! ಸಮರಸೇನನೆಂಬವನು, ಇದೇ ಸ್ವಲ್ಪ ಹೊತ್ತಿನ ಮೊದಲು ನನ್ನ ಕೈಯಿಂದ ತಪ್ಪಿಸಿಕೊಂಡು ಓಡಿ ಹೋಗಿ ಬಿಟ್ಟ. ಅವನು ನನ್ನ ಬದ್ಧ ವಿರೋಧಿ. ನಾನು ಅವನನ್ನು ಬಂದಿಯಾಗಿ ಹಿಡಿದೆನು ಕೂಡ. ನಾನು ಸ್ವಲ್ಪ ಅಲಕ್ಷ್ಯವಾಗಿರುವ ಸಂಧಿ ಸಾಧಿಸಿ ತಪ್ಪಿಸಿಕೊಂಡು ಓಡಿ ಬಿಟ್ಟ !" ಎಂದನು ವ್ಯಾಘ್ರದತ್ತ.

ವ್ಯಾಘ್ರದತ್ತನು ಹೇಳುವುದನ್ನು ಕೇಳುತ್ತಿದ್ದಂತೆ ಏಕಾಕ್ಷಿಗೂ ಪರಿಸ್ಥಿತಿ ಅರ್ಥವಾಗ ತೊಡಗಿತು. ಸಮರಸೇನನನ್ನು ಹುಡುಕಿ ಹಿಡಿಯುವ ಕಾರ್ಯದಲ್ಲಿ ವ್ಯಾಘ್ರದತ್ತನು ಸಹಾಯಮಾಡಬಲ್ಲನೆಂದು ಅವನಿಗೆ ತೋರಿತು. ಆದರೆ ದುಡುಕಿ ನಂಬ ಬಾರದು. ಸಮರಸೇನನಿಗೂ ವ್ಯಾಘ್ರದತ್ತನಿಗೂ ವಿರೋಧಉಂಟಾಗಲು ಕಾರಣವೇನೆಂಬುದನ್ನು ಮೊದಲು ತಿಳಿಯಬೇಕೆಂದುಕೊಂಡನು.

"ನಿನಗೂ ಆ ಸಮರಸೇನನಿಗೂ ಏನು ಸಂಬಂಧ? ನಿಮ್ಮೊಳಗೆ ವಿರೋಧ ಉಂಟಾಗಲು ಕಾರಣವೇನು ? ಅವನು ನಿನಗೆ ಬಂದಿಯಾಗಿ ಸಿಕ್ಕಿ, ಹೇಗೆ ತಪ್ಪಿಸಿಕೊಂಡು ಹೋಗಲು ಸಾಧ್ಯವಾಯಿತು ? ಅದನ್ನೆಲ್ಲ ಸ್ವಲ್ಪ ವಿವರಿಸಿ ಹೇಳು ನೋಡುವಾ" ಎಂದನು ಏಕಾಕ್ಷಿಮಾಂತ್ರಿಕ.

"ಮಹಾಮಾಂತ್ರಿಕರಾದ ನಿಮಗೆ ಗೊತ್ತಿಲ್ಲದ್ದೇನಿದೆ? ತಾವು ಸರ್ವಜ್ಞರು. ಹೊಸತಾಗಿ ನಾನು ಏನು ತಾನೇ ಹೇಳಲಿ ? " ಎಂದು ವ್ಯಾಘ್ರದತ್ತನು ಏಕಾಕ್ಷಿಯ ಮುಂದೆ ಎರಡು ಕೈಗಳನ್ನೂ ಜೋಡಿಸಿ ನಮಸ್ಕಾರ ಮಾಡಿದನು.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)





# ಬುದ್ಧಿವಂತಿಕೆ

**ಸಾ**ರಾಸಾರ ವಿವೇಚನೆಯಲ್ಲಿ ಇದಿರಿಲ್ಲದವನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಮರಹತ್ತಿ ಕೆಳಗಿಳಿಸಿ ತನ್ನ ಹೆಗಲ ಮೇಲೇರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ಯಾವ ಲಾಭವನ್ನುದ್ದೇಶಿಸಿ ಇಷ್ಟೊಂದು ಬನ್ನ ಬಡುತ್ತಿರುವಿಯೋ ನಾನರಿಯೆನು. ಧನವನ್ನು ಸಂಪಾದಿಸುವ ವಿಷಯದಲ್ಲಿ ಮಾನವರ ನಡುವೆ ವಿಪರೀತವಾಗಿ ಮೇಲಾಟ ನಡೆಯುವುದುಂಟು. ಆಗ ಒಬ್ಬರಮೇಲೊಬ್ಬರಿಗೆ ಶತ್ರುತ್ವ ಬರುವುದೂ ಇದೆ. ಈ ಸಂದರ್ಭದಲ್ಲಿ ಬುದ್ಧಿವಂತಿಕೆಯಲ್ಲಿ ಯಾರು ಹೆಚ್ಚು ಎಂಬ ಸಮಸ್ಯೆಗೆ ಸಿಕ್ಕಿಕೊಂಡು ಶತ್ರುಗಳಾದ ಇಬ್ಬರ ವಿಚಿತ್ರ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾನಡೆ" ಎಂದು ಹೀಗೆ ಕಥೆ ಹೇಳಲು ಪ್ರಾರಂಭಿಸಿತು.

ಕೋಸಲದೇಶದೊಳಗಿನ ಮಾತಂಗನಗರವು ದೊಡ್ಡ ದೊಡ್ಡ ವರ್ತಕರಿಗೊಂದು ಕೇಂದ್ರವಾಗಿತ್ತು.

ಬೇತಾಳಕಥೆಗಳು



ಅಂತಹ ವರ್ತಕರೊಳಗೆ ಸುಧಾಕರನೆಂಬ ವರ್ತಕನೊಬ್ಬನು ಪ್ರಸಿದ್ಧನಾಗಿದ್ದನು. ಎಷ್ಟು ಪ್ರಸಿದ್ಧನಾಗಿದ್ದನೆಂದರೆ, ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದ ಬುದ್ಧಿವಂತಿಕೆಯಲ್ಲಿ ಅವನ ಅನಂತರವೇ ಉಳಿದವರು ಎಂದು ಹೇಳಿಕೊಳ್ಳುತ್ತಿದ್ದರು. ಇದು ಅವನಿಗೂ ತುಂಬ ಹೆಮ್ಮೆಯ ವಿಷಯವಾಗಿತ್ತು.

ಅವನದು ಸುಗಂಧದ್ರವ್ಯಗಳ ವ್ಯಾಪಾರವಾಗಿತ್ತು. ನಗರದೊಳಗೆ ಉತ್ತಮವಾದ ಸುಗಂಧದ್ರವ್ಯ ವ್ಯಾಪಾರಿಯಾದವನು ಅವನೊಬ್ಬನೇ. ಅಂತಲೇ ಅವನಿಗೆ ಅಷ್ಟೊಂದು ಪ್ರಶಂಸೆ.

ಹೀಗಿರುವಾಗ ಆ ನಗರಕ್ಕೆ ಸಾರಗಂನೆಂಬ ಯುವಕನೊಬ್ಬನು ಬಂದು, ಅವನೂ ಸುಗಂಧ ದ್ರವ್ಯಗಳ ವ್ಯಾಪಾರಕ್ಕೇ ಪ್ರಾರಂಭಿಸಿದನು, ಅವನದೂ ಶ್ರೇಷ್ಠವಾದ ಸುಗಂಧ ದ್ರವ್ಯಗಳೇ. ಸ್ವಲ್ಪ ಮಾತ್ರ ಕಾಲಾವಧಿಯೊಳಗೆ ಅವನು ತುಂಬಾ ಲಾಭವನ್ನು ಸಂಪಾದಿಸ ತೊಡಗಿದನು.

ಅವನ ಪ್ರತಿಸ್ಪರ್ಧೆಯಿಂದಾಗಿ ಸುಧಾಕರನ ವ್ಯಾಪಾರವು ಸ್ವಲ್ಪ ಇಳಿಮುಖವಾಗ ತೊಡಗಿತು. ಆದರೆ ಸುಧಾಕರನು ಸಾರಂಗನನ್ನು ಒಂದು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. ಅದೊಂದು ಆರಂಭ ಶೂರತನವೆಂದು ಅಲಕ್ಷ್ಯವಾಗಿದ್ದನು. ಅವನ ಪರಿಚಯ ಮಾಡಿಕೊಳ್ಳಬೇಕೆಂಬ ಗೊಡವೆಗೂ ಹೋಗಲಿಲ್ಲ ಸುಧಾಕರ.

ಪ್ರತಿವರ್ಷವೂ ಅರಬ್ಬೀದೇಶದಿಂದ ಕೆಲಮಂದಿ ವರ್ತಕರು ಬಂದು ಸುಧಾಕರನ ಹತ್ತಿರ ಬಹು ದೊಡ್ಡ ಮೊತ್ತದ ವ್ಯಾಪಾರಮಾಡಿ ಸುಗಂಧದ್ರವ್ಯಗಳನ್ನು ಒಯ್ಯುತ್ತಿದ್ದರು. ಅವರಿಗಾಗಿಯೇ ಸುಧಾಕರನು ಸರಕುಗಳನ್ನು ಪ್ರತ್ಯೇಕವಾಗಿರಿಸುತ್ತಿದ್ದನು. ಈ ಅರಬ್ಬೀವರ್ತಕರಿಂದ ಸುಧಾಕರನಿಗೆ ಇಬ್ಬಗೆಯ ಪ್ರಯೋಜನಗಳಾಗುತ್ತಿದ್ದುವು. ಒಂದೇಸಾರಿ ಹೆಚ್ಚು ಸರಕು ಮಾರಾಟವಾಗುವುದು ಒಂದು; ಅದಕ್ಕೆ ತಕ್ಕಂತೆ ಹೆಚ್ಚಿನ ಲಾಭಗಳು ಎರಡನೆಯದು.

ಈ ಸಂಗತಿಯನ್ನು ತಿಳಿದುಕೊಂಡಿದ್ದ ಸಾರಂಗನು ಈ ವರ್ಷ ಆ ಅರಬ್ಬೀ ವರ್ತಕರಿಂದ ಬರುವ ದೊಡ್ಡ ವ್ಯಾಪಾರವನ್ನು ತಾನು ವಶಪಡಿಸಿಕೊಂಡು ಲಾಭ ಸಂಪಾದಿಸಬೇಕೆಂದು ನಿಶ್ಚಯಿಸಿಕೊಂಡನು. ಸುಧಾಕರನಿಗಿಂತಲೂ ತಾನುಕಡಿಮೆ ಬೆಲೆಯನ್ನೇ ಹೇಳಿ ಭಾರಿಮೊತ್ತದ ಸರಕನ್ನು ಮಾರುವ ನಿರ್ಧಾರದಲ್ಲಿ ಅವನಿದ್ದನು. ಹೀಗೆ ನಿರೀಕ್ಷಿಸಿಕೊಂಡಿರಲು ಅರಬ್ಬೀವರ್ತಕರು ಬರುವರೆಂಬ ವಾರ್ತೆ ಅವನಿಗೆ ಗೊತ್ತಾಯಿತು.

ಹಾಗಿರಲು ಒಂದು ದಿನ ಒಬ್ಬ ಮುದುಕನು ಸಾರಂಗನ ಬಳಿಗೆ ಬಂದು ವ್ಯಾಪಾರದ ಸೂಕ್ಷ್ಮತೆಗಳನ್ನು ತಿಳಿಸುವವನಂತೆ ಸಾರಂಗನೊಂದಿಗೆ, "ನಾನು ನಿನಗೆ ಒಳ್ಳೆಯದಾಗ ಬೇಕೆಂತಲೇ ಹೇಳುತ್ತಿದ್ದೇನೆ, ನೀನು ಸುಧಾಕರನೊಂದಿಗೆ ಸ್ಪರ್ಧಿಸುವ ಆತುರದಲ್ಲಿ ನಿನ್ನ ಸುಗಂದದ್ರವ್ಯಗಳ ಬೆಲೆಯನ್ನು ಮಾತ್ರ ತಗ್ಗಿಸಿಬಿಡಬೇಡ. ಅದರಿಂದ ನೀನೂ

ಸುಧಾಕರನೂ ಮಾತ್ರವಲ್ಲದೆ, ನಮ್ಮ ದೇಶಕ್ಕೂ ಸಹ ಬಹಳ ನಷ್ಟವಾಗುತ್ತದೆ. ಸುಧಾಕರನು ಒಳ್ಳೆಯ ಮನುಷ್ಯ. ನೀವಿಬ್ಬರೂ ಕೂಡಿ ಮಾತಾಡಿಕೊಂಡು, ಬರಲಿರುವ ಅರಬ್ಬೀ ವರ್ತಕರಿಗೆ ಇಬ್ಬರೂ ಅರ್ಧಾರ್ಧ ಸರಕುಗಳನ್ನು ಮಾರುವುದೇ ನಿಮ ಗಿಬ್ಬರಿಗೂ ಒಳ್ಳೆಯದು," ಎಂದನು.

ಮುದುಕನ ಮಾತು ಕೇಳಿ ಸಾರಂಗನು ನಕ್ಕು, "ನಿಮ್ಮನ್ನು ಸುಧಾಕರನು ಇಲ್ಲಿಗೆ ಕಳುಹಿಸಿದ ನೇನು ? ಅವನಿಗೆ ತನ್ನ ಬುದ್ಧಿವಂತಿಕೆಯ ಮೇಲೆ ನಂಬುಗೆ ತಪ್ಪಿ, ನನ್ನ ಬುದ್ಧಿವಂತಿಕೆಗೆ ಹೆದರುತ್ತಾ ನೆಂದಾಯಿತು " ಎಂದನು.

ಅದನ್ನು ಕೇಳಿ ಮುದುಕನು ಶಾಂತರೀತಿಯಲ್ಲಿ, "ನೀನೊಬ್ಬ ಹುಚ್ಚ. ಬುದ್ಧಿವಂತಿಕೆಯಲ್ಲಿ ಸುಧಾ ಕರನಿಗೆ ಸಾಟಿಯಾದವರು ಈ ಕಡೆಯಲ್ಲಿ ಯಾರೂ ಇಲ್ಲವೆಂದು ತಿಳಿ. ಒಂದು ವೇಳೆ ನಿನ್ನ ಮೂಲಕ ವಾಗಿ ಅರಬ್ಬೀ ವರ್ತಕರ ವ್ಯಾಪಾರವು ಆತನಿಗೆ ದಕ್ಕಲಿಲ್ಲವೆಂದುಕೋ, ಆಗ ಕೂಡಾ ಜನರು ನಿನ್ನ ಬುದ್ಧಿವಂತಿಕೆಯನ್ನು ಮೆಚ್ಚಿಕೊಳ್ಳಲಾರರು. ಸುಧಾಕರನು ತಾನಾಗಿ ನಿನ್ನನ್ನು ಮೆಚ್ಚಿಕೊಂಡರೆ ಹೊರತು, ಈ ನಗರದವರಾರೂ ನಿನ್ನ ಬುದ್ಧಿವಂತಿಕೆ ಯನ್ನು ಗುರುತಿಸಿ ಮೆಚ್ಚಿಕೊಳ್ಳುವವರಲ್ಲ" ಎಂದನು.

ಸುಧಾಕನಿರಗೆ ಆ ನಗರದಲ್ಲಿರುವ ಪ್ರಖ್ಯಾತಿ ಎಷ್ಟರಮಟ್ಟಿನದೆಂದು ಸಾರಂಗನಿಗೆ ಗೊತ್ತಿತ್ತು. ಆದರೆ ಸಾರಂಗನಿಗೆ ತಾನು ತುಂಬಾ ತಿಳುವಳಿಕೆ ಯುಳ್ಳವನೆಂಬುದರಲ್ಲಿ ಏನೂ ಸಂದೇಹವಿದ್ದಿಲ್ಲ. ಈಗ ತಾನು ಸುಧಾಕರನಿಗಿಂತಲೂ ಹೆಚ್ಚಿನವನೆನಿಸಿ ಕೊಳ್ಳಲಿಕ್ಕಾಗಿಯೇ, ಅವನು ಮಾಡುವ ಸುಗಂಧ ದ್ರವ್ಯಗಳ ವ್ಯಾಪಾರವನ್ನೇ ಇವನೂ ಕೈಕೊಂಡಿದ್ದನು.

"ಹಾಗಾದರೆ ನಾನು ಏನು ಮಾಡಿದರೆ ಆ ಸುಧಾಕರನು ನನ್ನನ್ನು ಬುದ್ಧಿವಂತನೆಂದು ಒಪ್ಪಿ ಕೊಳ್ಳುತ್ತಾನೆ?" ಎಂದು ಸಾರಂಗನು ಮುದುಕನನ್ನು ಕೇಳಿದನು,

"ಒಂದು ಮಾತ್ರ ನಿಜ. ಎಷ್ಟೇ ಬುದ್ಧಿವಂತ ನಾದರೂ ಸುಧಾಕರನಿಂದ ಸಾಧ್ಯವಾಗದ ಕೆಲಸಗಳೂ





ಇವೆ. ಅಂತಹ ಕೆಲಸಗಳನ್ನು ಮಾಡಿದವನನ್ನು ಅವನು ಮೆಚ್ಚಿಕೊಳ್ಳುತ್ತಾನೆ. ನೀನು ಒಮ್ಮೆ ಹೋಗಿ ಅವನೊಡನೆ ಮಾತಾಡಬಾರದೇನು?" ಎಂದನು ಮುದುಕ.

ಸಾರಂಗನಿಗೆ ಕುತೂಹಲವೆದ್ದಿತು. ಅವನು ಸುಧಾಕರನನ್ನು ನೋಡಲು ಬಂದು, ತಾನು ಯಾರೆಂಬುದನ್ನು ತಿಳಿಸಿ, "ಬುದ್ಧಿವಂತಿಗೆಯಲ್ಲಿ ನೀವು ಹೆಚ್ಚೋ ನಾನು ಹೆಚ್ಚೋ ತಿಳಿದುಕೊಳ್ಳ ಬೇಕೆಂದು ನನಗೊಂದು ಆಶೆ. ನಿಮ್ಮಿಂದಾಗದ ಕೆಲಸವೇನಾದರೂ ಇದ್ದರೆ ಹೇಳಿರಿ. ನಾನು ಮಾಡಿ ಬಿಡುತ್ತೇನೆ" ಎಂದನು.

ಸುಧಾಕರನು ಸಾರಂಗನನ್ನು ಆಪ್ಯಾಯತೆಯಿಂದ ನೋಡಿ, ಆದರಿಸಿ, "ನಾನು ಮಾಡಲಾಗದ ಕೆಲಸಗಳು ಅನೇಕ ಇವೆ. ಅವುಗಳಲ್ಲಿ ಕೆಲವು ನಿನ್ನಿಂದಾಗಲೂ ಬಹುದು. ಆದರೆ ನಾನೂ ನೀನೂ ಸಹಾ ಮಾಡಲು ಸಾಧ್ಯವಿಲ್ಲದ ಕೆಲಸ ಒಂದಿದೆ. ಅದೇನಂದರೆ, ಸ್ರವಂತೀನಗರದಲ್ಲಿರುವ ಮುಕ್ತಗುಪ್ತನ ಮನೆಯಿಂದ ಮರಕತ ಹಾರವನ್ನು ತರುವ ಕೆಲಸ." ಎಂದನು.

"ತರುವುದೆಂದರೆ ಹೇಗೆ ನಿಮ್ಮ ಅಭಿಪ್ರಾಯ? ಹಣಕೊಟ್ಟು ಕೊಂಡುಕೊಂಡು ತರುವುದೋ, ಕದ್ದು ತರುವುದೋ?" ಎಂದು ಸಾರಂಗನು ಕೇಳಿದನು.

"ಅದು ಹೇಗೆ ತಂದರೂ ನನಗೇನೂ ಅಭ್ಯಂತರ ವಿಲ್ಲ." ಎಂದನು ಸುಧಾಕರ.

ಸಾರಂಗನು ಆ ಮರಕತ ಹಾರವನ್ನು ತರುತ್ತೇನೆಂದು ಹೇಳಿ ಹೊರಟುಹೋದನು, ಅವನು ಎರಡು ದಿನ ಪ್ರಯಾಣ ಮಾಡಿದಮೇಲೆ ಸ್ರವಂತಿ ನಗರವನ್ನು ತಲಪಿದನು. ಅಲ್ಲಿದ್ದ ದೊಡ್ಡ ದೊಡ್ಡ ವರ್ತಕರಾರನ್ನು ಕೇಳಿದರೂ ಮುಕ್ತಗುಪ್ತನ ಸಮಾಚಾರ ತಿಳಿಯದೆ ಹೋಯಿತು. ಕಡೆಗೆ ಒಬ್ಬ ವರ್ತಕನು, ಸಾರಂಗನನ್ನು ತನ್ನ ಪರಿಚಯದ ಸುಧಾಕರನು ಕಳುಹಿಸಿದನೆಂಬುದನ್ನು ತಿಳಿದು, "ಈ ನಗರದಲ್ಲಿ ಮುಕ್ತಗುಪ್ತನೆಂಬ ವರ್ತಕನು ಯಾರೂ ಇಲ್ಲ, ಮುಕ್ತಗುಪ್ತನೆಂಬೊಬ್ಬ ಬಡ ಮನುಷ್ಯನು ಶಿವಾಲಯದ ಬದಿಯ ಮನೆಯಲ್ಲಿ ವಾಸವಾಗಿದ್ದಾನೆ. ಅವನು ಯಾವಕಾಲದಲ್ಲಾದರೂ ವರ್ತಕನಾಗಿದ್ದನೋ ಇಲ್ಲವೋ ತಿಳಿಯದು. ಅಥವಾ ಅವನು ಸುಧಾಕರನಿಗೆ ದೂರದ ಬಂಧುವಾಗಿದ್ದರೂ ಇದ್ದಾನು" ಎಂದನು.

ಸಾರಂಗನು ಶಿವಾಲಯದ ಪಕ್ಕದ ಮುಕ್ತಗುಪ್ತನ ಮನೆಯನ್ನು ನೋಡಿದ ಕೂಡಲೇ ನಿರಾಶೆಗೊಂಡನು. ಆ ಮನೆಯಲ್ಲಿ ದಾರಿದ್ರ್ಯವು ತಾಂಡವಿಸಿಕೊಂಡಿದ್ದಿತು. ಅಂತಹ ಮನೆಯಲ್ಲಿ ಬೆಲೆಬಾಳುವ ಮರಕತದ ಹಾರವಿರುವುದೆಂದರೇನು?

ವಿಚಾರಿಸಿದಾಗ ಮುಕ್ತಗುಪ್ತನು ಸಾರಂಗನೊಂದಿಗೆ, "ನನಗೆ ಸಂಬಂಧಿಗಳಾಗಿರುವವರೆಲ್ಲಾ ಒಳ್ಳೇಸ್ಥಿತಿಯಲ್ಲಿರುವವರೇ. ಆದರೆ ನಾನು ಮಾತ್ರ ವಿರಾಗಿಯಾ

ಗಿದ್ದೇನೆ. ಅಲ್ಲಿ ಇಲ್ಲಿ ಹೇಗೋ ಊಟ ಮಾಡುತ್ತೇನೆ. ಮಲಗಲಿಕ್ಕೆ ಈ ಹಾಳುಮನೆಗೆ ಬರುತ್ತೇನೆ. ಅಷ್ಟೇ" ಎಂದನು.

ಆದರೂ ಸಾರಂಗನು ಮರಕತಹಾರವನ್ನು ಕುರಿತು ಅವನನ್ನು ಕೇಳಿದನು. "ಅದಕ್ಕೇನು, ನೋಡಿಕೋ. ಈ ಮನೆಯಲ್ಲಿ ನಿನಗೆ ಏನು ಸಿಕ್ಕಿದರೂ ತೆಗೆದುಕೊಂಡು ಹೋಗು. ನನ್ನ ಅಡ್ಡಿ ಏನೂ ಇಲ್ಲ" ಎಂದನು ಮುಕ್ತಗುಪ್ತ.

ಅಲ್ಲಿ ಏನೂ ಸಿಗಲಿಲ್ಲ, ಸಾರಂಗನು ಎರಡು ದಿನ ಆ ನಗರದಲ್ಲಿ ಕಳೆದು, ಈ ಮುಕ್ತಗುಪ್ತನ ಹತ್ತಿರ ಮರಕತ ಹಾರವಿಲ್ಲವೆಂದೂ, ಬೇರೆಲ್ಲಿಯೂ ಅಡಗಿಸಿಡಲೂ ಇಲ್ಲವೆಂದೂ ಖಚಿತಪಡಿಸಿಕೊಂಡು, ರೇಗಿಕೊಳ್ಳುತ್ತ ಹಿಂದಿರುಗಿ ಪ್ರಯಾಣ ಮಾಡಿ, ಸುಧಾಕರನ ಬಳಿಗೆಬಂದು, "ನೀವು ನನಗೆ ಸುಳ್ಳೇ ಹೇಳಿದಿರಿ. ಮುಕ್ತಗುಪ್ತನೆಂಬವನು ಶತದರಿದ್ರ. ಎಲ್ಲಾ ಬಂಧ ಹರಿದೊಗೆದ ವಿರಾಗಿ, ಅವನ ಹತ್ತಿರ ಮರಕತಹಾರವೂ ಇಲ್ಲ. ಏನೂ ಇಲ್ಲ! ಇಲ್ಲದ್ದನ್ನು ನಾನು ಹೇಗೆ ತರಲಿ?" ಎಂದನು.

"ನಾನು ಸುಳ್ಳು ಹೇಳಲಿಲ್ಲಪ್ಪಾ. ಮುಕ್ತಗುಪ್ತನ ಮನೆಯಿಂದ ಮರಕತಹಾರ ತರಲು ಹೇಳಿದೆನೇ ಹೊರತು ಅವನ ಕೊರಳಿನಲ್ಲಿ ಮರಕತಹಾರ ಇದೆಯೆಂದು ನಾನೆಲ್ಲಿ ಹೇಳಿದೆ?" ಎಂದನು ಸುಧಾಕರ.

"ಇಲ್ಲದ ವಸ್ತುವನ್ನು ತೆಗೆದುಕೊಂಡು ಬರುವುದೆಂದರೆ ಎಂತಹ ಬುದ್ಧಿವಂತನಿಗೂ ಸಾಧ್ಯವಾಗುವುದಿಲ್ಲವೆಂದು ನಿಮಗೆ ತಿಳಿಯದೆ?" ಎಂದನು ಸಾರಂಗ.

"ಅದು ತಿಳಿದಿದೆ. ನನ್ನಿಂದ ಸಾಧ್ಯವಾಗದ ಕೆಲಸಮಾಡುವ ಕುತೂಹಲ ತೋರಿಸಿದ್ದರಿಂದ ಹಾಗೆ ಹೇಳಿದೆ, ಅಷ್ಟೇ!" ಎಂದನು ಸುಧಾಕರ.

"ನಿಮ್ಮ ಚಮತ್ಕಾರದ ಮಾತಿನಿಂದ ಬೆಲೆಬಾಳುವ



ನನ್ನ ಕಾಲವನ್ನು ಸುಮ್ಮನೆ ವೃಥಾಮಾಡಿಸಿದಿರಿ! ಏಕೆ?" ಎಂದು ಕೇಳಿದನು ಸಾರಂಗ.

"ನಿನ್ನ ಕಾಲವನ್ನು ವ್ಯರ್ಥಗೊಳಿಸಿದೆನೆಂಬುದೇನೋ ನಿಜವೇ. ಸುಮ್ಮನೆ ಮಾತ್ರ ಅಲ್ಲ. ನೀನು ಈ ನಗರದಲ್ಲಿಲ್ಲದ ಸಮಯದಲ್ಲಿ ಅರಬ್ಬೀ ವರ್ತಕರೊಂದಿಗೆ ನನ್ನ ವ್ಯಾಪಾರವು ಸಲೀಸಾಗಿ ನಡೆಯಿತಲ್ಲ! ನೀನಿರುತ್ತಿದ್ದರೆ ನಡೆಯುತ್ತಿತ್ತೇ?" ಎಂದನು ಸುಧಾಕರ.

ಸಾರಂಗನು ಎರಡು ಕೈಗಳಿಂದಲೂ ತಲೆ ಒತ್ತಿಕೊಂಡು ಕುಸಿಕುಳಿತು, "ಓಹೋ! ನಿಮ್ಮ ಬುದ್ಧಿವಂತಿಕೆ ದೊಡ್ಡದೇಸರಿ. ಒಪ್ಪಿದೆ! ನಾನು ಸೋತೆ!" ಎಂದನು.

"ಬುದ್ಧಿವಂತಿಕೆಯ ವಿಷಯ ಹೇಗಿದ್ದರೂ. ಇನ್ನೂ ಬೇಕಾಗಿದ್ದರೆ, ನಾನು ಮಾಡಲಾಗದ ಕೆಲಸ ಸತ್ಯಕ್ಕೂ ಒಂದು ಇಲ್ಲಿಯೇ ಇದೆ. ನೀನು ಈಗಲೇ ಮಾಡಲು ಸಾಧ್ಯ" ಎಂದನು ಸುಧಾಕರ ನಗುತ್ತ.

"ಏನದು ?" ಎಂದು ಸಾರಂಗನು ಕೇಳಿದನು." ಮತ್ತೇನಿಲ್ಲ, ನನ್ನ ಮಗಳನ್ನು ಮದುವೆ ಮಾಡಿ ಕೊಳ್ಳಬೇಕು" ಎಂದನು ಸುಧಾಕರ. ಆ ಮಾತು ಕೇಳಿ ಸಾರಂಗನಿಗೆ ಇನ್ನಿಷ್ಟು ಆಶ್ಚರ್ಯವಾಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಸುಧಾಕರನು ಹೇಳಿದ ಹಾಗೆ ನಿಜಕ್ಕೂ ಸಾರಂಗನು ಅವನಿಗಿಂತ ಹೆಚ್ಚಿನ ಬುದ್ಧಿವಂತನಾಗಿದ್ದರೆ ಮರಕತ ಹಾರದ ಹೆಸರಿನಲ್ಲಿ ಸುಧಾಕರನು ಹರಡಿದ ಬಲೆಯಲ್ಲಿ ಏಕೆ ಬಿದ್ದನು? ಅಂಥವನನ್ನು ಸುಧಾಕರನು ಅಳಿಯನಾಗಿ ಮಾಡಿಕೊಳ್ಳಲು ನೋಡುವುದು ಬುದ್ಧಿಹೀನತೆಯ ಕೆಲಸವೆನ್ನಿಸಿಕೊಳ್ಳುವುದಿಲ್ಲವೆ ? ತನ್ನ ತಂತ್ರವನ್ನು ತಿಳಿದುಕೊಳ್ಳಲಾಗದವನಿಗೆ ಮಗಳನ್ನು ಕೊಟ್ಟು ಅಳಿಯನಾಗಿ ಮಾಡಿಕೊಳ್ಳುವುದು ಬುದ್ಧಿಹೀನತೆಯಲ್ಲವೇನು ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರಹೋಳಾಗುತ್ತದೆ !" ಎಂದು ಹೇಳಿತು.

ಆದಕ್ಕೆ ತ್ರಿವಿಕ್ರಮರಾಜನು ಹೀಗೆಂದನು: "ಸುಧಾಕರನು ಸಾರಂಗನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳುವುದರಲ್ಲಿ ತುಂಬಾ ವಿವೇಕವನ್ನೇ ತೋರಿಸಿದ್ದಾನೆನ್ನಲು ಏನೂ ಸಂದೇಹವಿಲ್ಲ. ಬುದ್ಧಿವಂತಿಕೆಯಲ್ಲಿ ಸಾರಂಗನು ತನಗಿಂತ ಕಡಿಮೆಯವನಲ್ಲವೆಂದು ಸುಧಾಕರನು ತಿಳಿದಿದ್ದುದರಿಂದಲೇ ಮರಕತಹಾರದ ನೆಪದಲ್ಲಿ ಅವನು ನಗರದಿಂದ ಹೊರಗೆ ಹೋಗುವಂತೆ ಮಾಡಿದನು. ಅಂತಹ ಗಟ್ಟಿಗನಾದ ಯುವಕನು ತನ್ನ ಅಳಿಯನಾದರೆ ವ್ಯಾಪಾರವನ್ನು ಇನ್ನಿಷ್ಟು ಸಾಮರ್ಥ್ಯದಿಂದ ನಡೆಸುತ್ತ, ತನ್ನ ಅನಂತರ ಕೂಡಾ ಅದು ತನ್ನ ಕುಟುಂಬದಲ್ಲೇ ಶಾಶ್ವತವಾಗಿರುವಂತೆ ಮಾಡಬಲ್ಲನೆಂದು ಸುಧಾಕರನಿಗೆ ನಂಬುಗೆಯಿತ್ತು. ಇನ್ನು ಸಾರಂಗನಲ್ಲಿದ್ದ ಮುಖ್ಯವಾದ ಲೋಪವೆಂದರೆ, ಯಾರನ್ನಾದರೂ ತನ್ನ ಬುದ್ಧಿವಂತಿಕೆಯಿಂದ ತನ್ನ ಜೀವನದ ಮಾರ್ಗಕ್ಕೆ ಉಪಯೋಗಿಸಿಕೊಳ್ಳುವುದರಿಂದ ನಷ್ಟವಿಲ್ಲವೆಂಬುದು ನಿಜವಾದರೂ, ಇದಿರಾಳಿಗಿಂತ ಹೆಚ್ಚಿನವನೆನಿಸಿಕೊಳ್ಳಬೇಕೆಂಬ ಆಶೆ ಹುಟ್ಟಿದಾಗ, ಬುದ್ಧಿವಂತನಾದವನೂ ತಪ್ಪಡಿಯಿಡುವನೆಂಬುದು ಅವನಿಗೆ ತಿಳಿಯಲಿಲ್ಲ. ಅವನ ಪ್ರಾಯದವೇಗ ಅಂಥಾದ್ದು. ಬುದ್ಧಿವಂತನಾದವನು ಕಾರ್ಯಸಾಧನೆಗೆ ಹೊರತು ಇತರರ ಮೇಲೆ ಆಧಿಕ್ಯತೆಯನ್ನು ಪ್ರಯೋಗಿಸಬಾರದು. ಸಾರಂಗನು ಅಂತಹ ತಪ್ಪುಮಾಡಿದುದರಿಂದಲೇ ಸುಧಾಕರನ ಮುಂದೆ ಸೋತನು."

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಮರದ ಕೊಂಬೆಗೆ ಹೋಗಿ ಸೇರಿತು.





# ಗಂಡ ತಪ್ಪಿತು

**ಹೊ**ಸತಾಗಿ ಪಟ್ಟಕ್ಕೆ ಬಂದ ರಾಜಾವಿಕ್ರಮಸಿಂಹನು ಯುವಕನಾಗಿದ್ದನು. ಅವಿವಾಹಿತನಾದ ಅವನು, ತನ್ನ ಸಾಮಂತರಾಜನಾದ ವೀರಕೇಸರಿಯ ಮಗಳು ಗೀತಾಂಜಲಿಯ ಅಂದಚಂದಗಳಿಗೆ ಮೆಚ್ಚಿ ಅವಳನ್ನೇ ಮದುವೆ ಮಾಡಿಕೊಂಡನು.

ಒಂದುದಿನ ವಿಕ್ರಮಸಿಂಹನ ಬಾವನಾದ ಸುಕೇತನು ಬೆಲೆಬಾಳುವ ಏಳು ರತ್ನಗಳನ್ನು ತಂದು ವಿಕ್ರಮ ಸಿಂಹನಿಗೆ ಬಹುಮಾನವಾಗಿ ಕೊಟ್ಟನು. ತನ್ನ ಬಾವನು ತನಗೆ ಏಳು ರತ್ನಗಳನ್ನು ಬಹುಮಾನ ಮಾಡಿದುದು ತನಗೆ ಕೆಡುಕುಬರಬೇಕೆಂತಲೇ ಎಂದು ಕೊಂಡು ವಿಕ್ರಮಸಿಂಹನು ಬಹು ಕೋಪದಿಂದ, ಸುಕೇತನನ್ನು ಸೆರೆ ಮನೆಗೆ ಹಾಕಿಸಿದನು.

ವಿಕ್ರಮಸಿಂಹನಿಗೆಕೆಲವು ಮೂಢವಿಶ್ವಾಸಗಳಿದ್ದುವು. ಏಳು ಎಂಬ ಸಂಖ್ಯೆಯ ಮೇಲೆ ಅವನಿಗೆ ಕೆಟ್ಟ ಭಯ. ಅವನ ಏಳನೆಯ ವಯಸ್ಸಿನಲ್ಲಿ ನೀರಿನಲ್ಲಿ ಬಿದ್ದು ಹೇಗೋ ರಕ್ಷಿಸಲ್ಪಟ್ಟು ಗಂಡದಿಂದ ತಪ್ಪಿದ್ದನು. ಆಮೇಲೆ ಒಂದುದಿನ ಏಳುಮಂದಿ ವೀರರೊಂದಿಗೆ ಬೇಟೆಗೆ ಹೋಗಿ, ಅರಣ್ಯದಲ್ಲಿ ಅವರಿಂದ ಬೇರ್ಪಟ್ಟು ಒಬ್ಬಂಟಿಗನಾಗಿ ಫಕ್ಕನೆ ಹಾರಿದ ಒಂದು ಹುಲಿಯೊಡನೆ ಹೋರಾಡುವಾಗ, ಅದೃಷ್ಟವಶಾತ್ ತಪ್ಪಿಹೋದ ಭಟರು ಬಂದು ಹುಲಿಯನ್ನು ಕೊಂದು ಅವನನ್ನು ರಕ್ಷಿಸಿದ್ದರು.

ಬಹುಮಾನ ಕೊಡಲು ಹೋಗಿ ತನ್ನ ಅಣ್ಣನು ಸೆರೆಮನೆಯ ಕಷ್ಟಕ್ಕೆ ಬಿದ್ದುದನ್ನು ನೋಡಿ ಗೀತಾಂಜಲಿ ತುಂಬಾ ದುಃಖಿಸಿದಳು. ಅವಳ ತಂದೆ ವೀರಕೇಸರಿ ಅಳಿಯನ ಮನಸ್ಸಿಗೆ ನೋವಾಗದಂತೆ ತನ್ನ ಕುಮಾರನ ಬಿಡುಗಡೆಯ ಉಪಾಯವನ್ನು ಆಲೋಚಿಸಿಕೊಂಡಿದ್ದನು.

ಆಮೇಲೆ ಆರೇಳು ದಿನಗಳಲ್ಲಿ ವಿಕ್ರಮಸಿಂಹನ ಆಸ್ಥಾನಕ್ಕೆ ಒಬ್ಬ ಯೋಗಿ ಬಂದನು. ಅವನು ರಾಜನ ಯೋಗಕ್ಷೇಮಗಳನ್ನು ಕೇಳಿ ತಿಳಿದು, "ರಾಜಾ, ಮನುಷ್ಯನಾದವನಿಗೆ ತಾಪತ್ರಯಗಳು ತಪ್ಪುವುದೇ ಇಲ್ಲ, ಏಳು ದಿನಗಳಲ್ಲಿ ಎಲ್ಲರೂ ಸಾಯುತ್ತಾರೆ, ಮತ್ತೆ ಏಳು ದಿನಗಳಲ್ಲಿ ಹುಟ್ಟುತ್ತಲೂ ಇರುತ್ತಾರೆ. ಇದನ್ನು ತಪ್ಪಿಸಲು ಸಾಧ್ಯವಿಲ್ಲವಷ್ಟೆ ?" ಎಂದನು.

ಆ ಮಾತು ಕೇಳಿ ವಿಕ್ರಮಸಿಂಹನು ಆಶ್ಚರ್ಯ ಪಡುತ್ತ," ಎಲ್ಲರೂ ಏಳು ದಿನಗಳಲ್ಲಿ ಹುಟ್ಟುವುದೂ

ಆರ್. ಎಸ್. ನಾರಾಯಣಮೂರ್ತಿ

ಸಾಯುವುದೂ ಅಂದರೆ, ನೀವೇನು ಹೇಳುವಿರೋ ನನಗೇನೂ ಗೊತ್ತಾಗಲಿಲ್ಲ" ಎಂದನು.

ಯೋಗಿ ನಗುತ್ತ, "ರಾಜಾ, ಒಂದು ವಾರವೆಂದರೆ ಏಳು ದಿನಗಳು ತಾನೆ? ಮನುಷ್ಯನ ಮರಣವು ಈ ಏಳು ದಿನಗಳಲ್ಲಿ ಒಂದು ದಿನ ಸಂಭವಿಸುತ್ತದೆ. ಹಾಗೆಯೇ ಹುಟ್ಟುವುದು ಕೂಡಾ. ಆದಿತ್ಯವಾರ ಶನಿವಾರಗಳ ಮಧ್ಯದಲ್ಲೇ ಸಂಭವಿಸುತ್ತದೆ. ಆದುದರಿಂದಲೇ ಏಳು ಎಂಬ ಸಂಖ್ಯೆಗೆ ಅಷ್ಟೊಂದು ಪ್ರಾಮುಖ್ಯತೆ" ಎಂದನು.

"ಏಳು ಸಂಖ್ಯೆಗೆ ಪ್ರಾಮುಖ್ಯತೆಯೆ? ಅದರಲ್ಲಿ ರೋದನವೇ ಧ್ವನಿಸುಸ್ತದೆ. ಏಳು ಬಹಳ ಕೆಟ್ಟ ಸಂಖ್ಯೆ" ಎಂದು ವಿಕ್ರಮಸಿಂಹನು ತನ್ನ ಅನುಭವಗಳನ್ನು ಹೇಳಿದನು.

ಅದನ್ನು ಕೇಳಿ ಯೋಗಿ, "ರಾಜಾ, ಏಳು ಒಳ್ಳೆಯ ಸಂಖ್ಯೆಯಾದುದರಿಂದಲೇ ಏಳನೇ ವಯಸ್ಸಿನ ನಿನ್ನ ಜಲಗಂಡವು ತಪ್ಪಿದೆ. ಹಾಗೆಯೇ ನೀನು ಏಳು ಮಂದಿಯೊಂದಿಗೆ ಬೇಟೆಗೆ ಹೋದುದರಿಂದಲೇ ಹುಲಿಯಿಂದ ಕಾಪಾಲ್ಪಟ್ಟಿರುವೆ" ಎಂದನು.

ಯೋಗಿಯ ಮಾತನ್ನು ನಂಬಲಾಗದವನಂತೆ ರಾಜನು ತಲೆಯಾಡಿಸುವುದನ್ನು ನೋಡಿ. ಯೋಗಿ ಮತ್ತೂ ಮುಂದುವರಿಸಿ ಹೀಗೆಂದನು: "ರಾಜಾ, ಏಳರ ಮಹತ್ವ ಒಂದೆರಡಲ್ಲ. ಪುರಾಣಗಳು ಹೇಳುವ ಮಹರ್ಷಿಗಳು ಏಳುಮಂದಿ. ಸೂರ್ಯನ ರಥಕ್ಕೆ ಏಳು ಕುದುರೆಗಳು. ಸಂಗೀತದ ಸ್ವರಗಳು ಏಳು. ಹಾಗೆಯೇ ಏಳು ಜನ್ಮಗಳ ಬಂಧನವೆನ್ನುತ್ತಾರೆ. ಈಗಾದರೂ ತಿಳಿಯಿತೇ ಆ ಸಂಖ್ಯೆಯ ಪ್ರಾಮುಖ್ಯತೆ?"

ಏಳು ಸಂಖ್ಯೆ ಕೆಟ್ಟುದೆಂಬ ನಂಬುಗೆ ರಾಜನಲ್ಲಿ ಸಡಿಲಿತು. ತನ್ನ ಮೂಢವಿಶ್ವಾಸವನ್ನು ಬಿಡಿಸಲಿಕ್ಕಾಗಿ ಈ ಯೋಗಿ ಬಂದಿರುವನೆಂದು ತಿಳಿಯದೆ, ರಾಜನು ಇನ್ನೊಂದು ಬಗೆಯ ಮೂಢವಿಶ್ವಾಸಕ್ಕೆ ಬಿದ್ದನು. ಈಗ ಏಳು ಎಂಬ ಸಂಖ್ಯೆ ಪರಮಪವಿತ್ರವಾದುದೆಂಬ ನಂಬುಗೆ ಅವನಿಗೆ ಬಂತು, ಕೂಡಲೇ ತನ್ನ ಬಾವನನ್ನು ಸೆರೆ ಮನೆಯಿಂದ ಬಿಡುಗಡೆಮಾಡಿಸಿ, ನಡೆದ ತಪ್ಪಿಗೆ ಕ್ಷಮಾಪಣೆ ಕೇಳಿಕೊಂಡನು.

ಹೀಗೆ ಯೋಗಿಯ ವೇಷದಲ್ಲಿ ಬಂದವನು ವೀರಕೇಸರಿಯ ಆಸ್ಥಾನಪಂಡಿತನಾದ ನಾರಾಯಣ ಭಟ್ಟನೆಂಬವನು. ಅವನು ತನ್ನ ರಾಜನಿಗೆ ನಡೆದ ಸಂಗತಿಯನ್ನು ಹೇಳಿ," ನಮ್ಮ ಯುವರಾಜನಿಗೇನೋ ಬಿಡುಗಡೆಯಾಯಿತು. ಈಗ ನಿಮ್ಮ ಅಳಿಯ ಮಹಾರಾಜನು ಏಳು ಸಂಖ್ಯೆ ಒಳ್ಳೆಯದೆಂಬ ಮೂಢ ವಿಶ್ವಾಸಕ್ಕೆ ಬಿದ್ದಿದ್ದಾನೆಂದು ನನಗೆ ಕಾಣುತ್ತದೆ. ಏನಾದರೇನು? ಪ್ರಸ್ತುತಕ್ಕೆ ನಮ್ಮ ಗಂಡ ತಪ್ಪಿತು" ಎಂದನು.



# ಅಭಿಮಾನದ ಆವೇಶ

ಭದ್ರಯ್ಯ ಸಾವುಕಾರ್ರ ಮನೆಯಲ್ಲಿ ಕಳ್ಳತನವಾಯಿತು. ಆದರೆ ಕದ್ದ ವಸ್ತುಗಳಿರುವ ಮೂಟೆ ಮನೆಯ ಆವರಣದ ಗೋಡೆಯ ಒಳಬದಿಯಲ್ಲೇ ಬಿದ್ದುಕೊಂಡಿತ್ತು. ಬೀದಿಯ ಜನರೆಲ್ಲಾ ಅಲ್ಲಿ ಸೇರಿ ಏನು ನಡೆದಿರ ಬಹುದೆಂದು ಊಹಿಸಲು ಪ್ರಯತ್ನಪಡುತ್ತಿದ್ದರು.

"ಕಳ್ಳ ಸಾಮಾನುಗಳನ್ನೆಲ್ಲ ಮೂಟೆ ಕಟ್ಟಿ ಎತ್ತಿಕೊಂಡು ಹೋಗಬೇಕೆಂದಿರುವಾಗ ಯಾರೋ ಬರುವ ಹಾಗೆ ಶಬ್ದವಾಗಿರಬೇಕು. ಕೂಡಲೇ ಮೂಟೆ ಇಲ್ಲೇ ಬಿಟ್ಟು ಓಡಿಹೋದ. ಬಂದದ್ದು ಬೆಕ್ಕೋ ನಾಯಿಯೋ! ಪುಕ್ಕಲು ಪುಂಡನಿಗೆ ಅಷ್ಟೇ ಸಾಕು! ಯಾವನೋ ಹೊಸತಾಗಿ ಕಳ್ಳ ತನಕ್ಕೆ ಕೈಹಾಕಿದವನು. ಕೇವಲ ಅಂಜುಕುಳಿ!" ಎಂದನು ಇದಿರು ಮನೆಯ ಕನಕಯ್ಯ.

"ಹಾಗಿರಲಿಕ್ಕಿಲ್ಲ. ಆಶೆಯಿಂದ ಸಿಕ್ಕಿದ್ದನ್ನೆಲ್ಲಾ ಮೂಟೆ ಕಟ್ಟಿಕೊಂಡ. ಹೊರಲು ಸಾಧ್ಯವಾಗದೆ ಇಲ್ಲೇ ಬಿಟ್ಟು ಓಡಿದ! ಬುದ್ಧಿಗೆಟ್ಟ ಆಶೆ ಬುರುಕ!" ಎಂದ ಪಕ್ಕದ ಮನೆಯ ಶೇಷಾದ್ರಿ.

"ಅವನೇನೋ ಈ ಬೀದಿಯವನೇ ಆಗಿದ್ದಾನು. ಇಷ್ಟೊಂದು ಸಾಮಾನು ಪಕ್ಕದ ಮನೆಯವರ ಕಣ್ಣಿಗೆ ಬೀಳದಂತೆ ಕಾಪಾಡೋದು ಕಷ್ಟಾ ಅಂದುಕೊಂಡು ಕಡೆಗೆ ಹೆದರಿ ಇಲ್ಲೇ ಬಿಟ್ಟು ಓಡಿದ್ದಾನೆ. ನಿದ್ಧೇ ಬುದ್ಧಿಯ ಮಂಕ!" ಎಂದ ಎರಡನೇ ಮನೆಯ ಶೇಷಣ್ಣ.

ಅದುವರೆಗೂ ಇದನ್ನೆಲ್ಲ ಕೇಳುತ್ತ ನೆಲ ನೋಡಿಕೊಂಡಿದ್ದ, ಹಿಂದಿನ ಮನೆಯ ಮಾಧವನೆಂಬವನು, ಆವೇಶದಿಂದ ತಲೆಯೆತ್ತಿ, "ನೀವಂದುಕೊಳ್ಳುವ ಹಾಗೆ ಆ ಕಳ್ಳ ಪುಕ್ಕನೂ ಅಲ್ಲ, ಆಶೆ ಬುರುಕನೂ ಅಲ್ಲ, ಮಂಕನೂ ಅಲ್ಲ. ಸಾಮಾನೆಲ್ಲಾ ಮೂಟೆ ಕಟ್ಟಿ ಓಡಿಹೋಗಲು ನೋಡಿದ. ಗೋಡೇ ಹತ್ತಿ ದಾಟುವಾಗ ಕೈತಾಗಿ ಮೂಟೆ ಈಚೆಗೆ ಬಿತ್ತು. ನಾನು ಆಚೆಗೆ ಬಿದ್ದೆ!" ಎಂದನು ಬಾಯಿ ತಪ್ಪಿ.

ಕಳ್ಳ ಸಿಕ್ಕಿಬಿದ್ದ!






# ತಂಗಿಯ ಮದುವೆ

ಒಂದು ಊರಿನಲ್ಲಿ ರುಕುಮಯ್ಯನೆಂಬ ಚಿಕ್ಕ ರೈತನೊಬ್ಬನಿದ್ದನು. ಅವನಿಗೆ ಎರಡು ಎಕರೆಗಳಷ್ಟೇ ಹೊಲಗಳಿದ್ದುವು. ಅವನಿಗೆ ಶಾಮಣ್ಣ ಮತ್ತು ಗೋಪಣ್ಣನೆಂಬ ಇಬ್ಬರು ಗಂಡು ಮಕ್ಕಳೂ, ಒಬ್ಬಳು ಹೆಣ್ಣು ಮಗಳೂ ಇದ್ದರು. ದೊಡ್ಡ ಮಗ ಶಾಮಣ್ಣನಿಗೆ ಮದುವೆಯಾಗಿ ಕೆಲವು ದಿನಗಳಾದ ಮೇಲೆ ರುಕುಮಯ್ಯನಿಗೆ ಏನೋ ರೋಗ ತಗಲಿ, ಹಾಸಿಗೆ ಹಿಡಿದನು.

ಕಡೆಗೆ ಅವನು ಸಾಯುವ ಮೊದಲು ಇಬ್ಬರು ಕುಮಾರರನ್ನೂ ಕರೆದು, "ನಾನು ನನ್ನ ಜೀವಿತ ಕಾಲದಲ್ಲಿ ಹೆಚ್ಚೇನೂ ಆಸ್ತಿಪಾಸ್ತಿ ಸಂಪಾದಿಸಲಾಗದೆ ಹೋದೆನು. ಉಳಿದಿರುವ ನನ್ನ ಕೊನೆಯ ಕೋರಿಕೆ ಒಂದೇಒಂದು, ಮಗಳಿಗೆ ಮದುವೆ ಮಾಡಲಾಗದೆ ಹೋಗುವೆನಲ್ಲಾ ಎಂಬುದೇ. ನೀವು ನಿಮ್ಮ ತಂಗಿಗೆ ಒಳ್ಳೇ ಸಂಬಂಧ ನೋಡಿ ಮದುವೆ ಮಾಡಬೇಕು" ಎಂದು ಹೇಳಿ ಕಣ್ಣು ಮುಚ್ಚಿದನು.

ತಂದೆ ತೀರಿಹೋದ ಮೇಲೆ ಶಾಮಣ್ಣನು ತಂಗಿಗೆ ತಕ್ಕ ಸಂಬಂಧವನ್ನು ಹುಡುಕ ತೊಡಗಿದನು. ಅವನು ನೋಡಿದ ಸಂಬಂಧಗಳಾವುದೂ ಅವನ ತಮ್ಮ ಗೋಪಣ್ಣನಿಗೆ ಹಿಡಿಸಲಿಲ್ಲ. ತಾನು ನೋಡಿದ ಪ್ರತಿಯೊಬ್ಬ ವರನಿಗೂ ತಮ್ಮನು ಏನೋ ಒಂದು ಕೊರತೆ ಹೇಳುವುದನ್ನು ನೋಡಿ ಅಣ್ಣನು "ಹೀಗಾದರೆ ನಮ್ಮ ತಂಗಿಗೆ ಮದುವೆಯಾಗಲಿಕ್ಕೇ ಇಲ್ಲ" ಎಂದನು.

"ಎಷ್ಟು ಕಷ್ಟವಾದರೂ ಸರಿಯೆ, ತಂಗಿಗೆ ಒಳ್ಳೆಯ ಸಂಬಂಧವನ್ನೇ ನೋಡಬೇಕಲ್ಲದೆ, ಒಂದಿದ್ದರೆ ಒಂದಿಲ್ಲದ ವರನು ನಮಗೆ ಬೇಡ. ಅವಸರ ಪಟ್ಟು ಅವಳ ಜೀವನವನ್ನು ಹಾಳು ಮಾಡಬಾರದು, ಅಪ್ಪನ ಕೋರಿಕೆ ನೆನಪಿಲ್ಲವೇ ಅಣ್ಣಾ?" ಎಂದನು ತಮ್ಮ.

"ತಮ್ಮಾ, ನೀನು ಅಂದುಕೊಳ್ಳುವ ಹಾಗೆ ಎಲ್ಲಾ ವಿಧದಲ್ಲಿಯೂ ಒಳ್ಳೆಯ ಸಂಬಂಧ ಬರಬೇಕಾದರೆ ಕೈ ತುಂಬಾ ದಕ್ಷಿಣೆಕಾಣಿಕೆ ಕೊಡಬೇಕು. ಅಷ್ಟೆಲ್ಲ ನಾವೆಲ್ಲಿಂದ ತರೋಣ?" ಎಂದನು ಶಾಮಣ್ಣ.

"ನಮಗಿರುವ ಎರಡು ಎಕರೆ ಹೊಲ ಮಾರಿ ಹೋದರೂ ಸರಿಯೆ, ತಂಗಿಗೆ ಒಳ್ಳೆಯ ಸಂಬಂಧವೇ ಆಗಬೇಕು" ಎಂದು ಗೋಪಣ್ಣನು ಹಟತೊಟ್ಟು ಹೇಳಿದನು.

ಜಿ. ಶಿವಕುಮಾರ್



ಈ ಸಂಭಾಷಣೆಗಳನ್ನು ಶಾಮಣ್ಣನ ಹೆಂಡತಿ ಕಾಳಿಂದಿ ಸಮೀಪವೇ ಮರೆಯಲ್ಲಿದ್ದು ಕೇಳುತ್ತಾ ಇದ್ದಳು. ಆಮೇಲೆ ಅವಳು ಗಂಡನೊಂದಿಗೆ "ನಿಮ್ಮ ತಮ್ಮನ ಆಲೋಚನೆ ನೋಡಿದರೆ, ಕಡೆಗೆ ನಮಗೆ ಉಳಿಯುವುದು ಕೋಲು ಚಿಪ್ಪುಗಳಷ್ಟೇ, ಸ್ವಲ್ಪವೂ ಮುಂದಾಲೋಚನೆಯಿಲ್ಲದೆ ನಿಮ್ಮ ತಮ್ಮ ಮಾತಾಡುತ್ತಾನೆ. ಹಾಗೆ ಬೇಕಾದರೆ ಆಸ್ತಿ ಪಾಲು ಮಾಡಿ, ಅವನ ಪಾಲಿಗೆ ಬರುವ ಒಂದೆಕರೆಯನ್ನು ಮಾರಿ ತಂಗಿಗೆ ಮದುವೆ ಮಾಡಲಿ" ಎಂದಳು.

ಶಾಮಣ್ಣನು ಆಂದೋಳನೆ ಪಡುತ್ತ ಆಲೋಚನೆಗೆ ಬಿದ್ದನು. "ಸುಮ್ಮನೆ ಆಲೋಚಿಸಲಿಕ್ಕೆ ಏನಿದೆ ? ಇಂಥ ಸಂಗತಿಯನ್ನು ಆರಹಾಕದೆ ಬಿಸಿಬಿಸಿಯಲ್ಲೇ ಮುಗಿಸಿಬಿಡಬೇಕು." ಎಂದಳು ಕಾಳಿಂದಿ.

ಅನಂತರ ಎರಡು ಮೂರು ದಿನಗಳು ಕಳೆದದೂ ಶಾಮಣ್ಣನ ಆಲೋಚನೆಗೆ ಅಂತ್ಯ ಕಾಣಲಿಲ್ಲ. ಆಗ ಅವನ ಅತ್ತೆಯ ಮನೆಯಿಂದ ಅಗತ್ಯ ಕೆಲಸಕ್ಕಾಗಿ ಕೂಡಲೇ ಇಬ್ಬರೂ ಹೊರಟು ಬರಬೇಕೆಂದು ಸುದ್ದಿ ಬಂದಿತು.

ತೌರಿನಲ್ಲಿ ಏನು ವಿಶೇಷವೋ ಎಂದು ಶಾಮಣ್ಣ ಕಾಳಿಂದಿಯರಿಬ್ಬರೂ ಹೊರಟರು. ಅಲ್ಲಿಗೆ ಹೋಗಿ ತಲಪಿದ ಕೂಡಲೇ, ಕಾಳಿಂದಿ ತನ್ನ ತಾಯಿಯೊಂದಿಗೆ, "ಏನಾದರೂ ವಿಶೇಷವಿದೆಯೇ ಅಮ್ಮಾ ? ಅಲ್ಲ ಸುಮ್ಮನೆ ಉಪಚಾರಕ್ಕೆ ನಮ್ಮನ್ನು ಬರಲಿಕ್ಕೆ ಹೇಳಿದೆಯಾ ?" ಎಂದು ಕೇಳಿದಳು.

"ಅದೇನಿಲ್ಲಮ್ಮ. ನಿನ್ನ ತಂಗಿಯ ಮದುವೇ ವಿಷಯಕ್ಕೇ ಬರ ಹೇಳಿದ್ದು. ಈ ದಿನ ಪಕ್ಕದ ಊರಿನವರೊಬ್ಬರು ಹುಡುಗೀನ ನೋಡಲಿಕ್ಕೆ ಬರುತ್ತಾರಂತೆ. ಇಲ್ಲಿ ದೊಡ್ಡವರು ಅಂತ ಯಾರಿದ್ದಾರೆ ? ಆ ವರ ನಿಮಗೆಲ್ಲ ಹಿಡಿಸ ಬೇಕಷ್ಟೆ ? ಅದಕ್ಕೇ ನಮ್ಮವರೆಲ್ಲ ಇರಲೀ ಅಂತ ಕರೆಸಿದ್ದು" ಎಂದಳು ತಾಯಿ.

ಅಂದುಕೊಂಡಂತೆ ವರನ ಕಡೆಯವರು ಬಂದರು. ವರನು ಚೆನ್ನಾಗಿಯೇ ಇದ್ದನು. ಚೆನ್ನಾಗಿ ವಿದ್ಯೆಕಲಿತವನೇ. ಅದರ ಮೇಲೆ ಬೇಕಾದಷ್ಟು ಆಸ್ತಿ ಕೂಡಾ ಇದ್ದಿತು. ಇಂಥ ಸಂಬಂಧ ಬಂದುದರಿಂದ ತಂಗಿ ಅದೃಷ್ಟವಂತೆಯೇ ನಿಜವೆಂದು ಕಾಳಿಂದಿ ಅಂದುಕೊಂಡಳು.

ಹುಡುಗಿಯ ಅಣ್ಣನು ಬಂದವರನ್ನು ಸ್ವಲ್ಪ ದೂರದ ವರೆಗೆ ಸಾಗ ಕಳುಹಿಸಿ ಮನೆಗೆ ಹಿಂದಿರುಗಿದನು. ಅವನ ನಿಸ್ತೇಜವಾದ ಮುಖವನ್ನು ನೋಡಿ ಕಾಳಿಂದಿ, "ಇದೇನಣ್ಣಾ, ಮುಖ ಬಾಡಿಸಿಕೊಂಡಿರುವೆಯಲ್ಲಾ ? ಹುಡುಗನಿಗೆ ನಮ್ಮ ತಂಗಿ ಹಿಡಿಸಲಿಲ್ಲವೇನು ?" ಎಂದು ದಿಗಿಲಿನಿಂದ ಕೇಳಿದಳು.

"ಹುಡುಗಿ ಏನೋ ಅವರಿಗೆ ಚೆಂದಾಗೇ ಹಿಡಿಸಿದೆ. ವರದಕ್ಷಿಣೆ ಇಪ್ಪತ್ತು ಸಾವಿರ ಕೊಡಬೇಕಂತೆ. ಅಷ್ಟನ್ನು ನಾವು ಎಲ್ಲಿಂದ ಬಾಚುವುದು?" ಎಂದನು ಹುಡುಗಿಯ ಅಣ್ಣ.

"ಹಾಗೆ ಉದಾಸೀನಮಾಡಿ ಒಳ್ಳೆಯ ಸಂಬಂಧ ವನ್ನು ಬಿಡುತ್ತಾರೇನು ? ಇರುವ ಯಾವುದನ್ನಾದರೂ ಮಾರಿ ಇದನ್ನು ಗಟ್ಟಿಮಾಡಿಬಿಡು. ಬೇಕೆಂದಾಗ ಇಂಥ ಒಳ್ಳೇ ಸಂಬಂಧ ಬರುವುದಿಲ್ಲಪ್ಪಾ" ಎಂದಳು ಅವರ ತಾಯಿ.

ಆ ಮಾತು ಕೇಳಿ ಹುಡುಗಿಯ ಅಣ್ಣ ಕೋಪ ಗೊಂಡವನಾಗಿ,"ಹೌದೌದು. ನಿಮಗೇನು ? ಬಾಯಿಗೆ ಬಂದ ಹಾಗೆ ಮಾತಾಡುವಿರಿ, ಇದ್ದದ್ದನ್ನೆಲ್ಲಾ ಮಾರಿ ತಂಗೀಗೆ ಮದುವೇ ಮಾಡಿಬಿಟ್ಟರೆ, ನಮ್ಮ ಗತಿ ಏನು? ಕಡೆಗೆ ಬೇಡಿ ತಿನ್ನ ಬೇಕಾದೀತು !" ಎಂದನು.

ಅವನ ಮಾತು ಕೇಳಿ ಕಾಳಿಂದಿ ಕೋಪದಿಂದ ಅಣ್ಣನನ್ನು ನೋಡಿ, "ಎಂಥಾ ಮನುಷ್ಯ ನೀನು ? ಒಂದು ಹುಡುಗಿಯ ಮದುವೆಗೆ ಬೇಕಾದ ಖರ್ಚನ್ನು ಉಳಿಸಿಕೊಂಡು, ಅವಳ ಕುತ್ತಿಗೆ ಕೊಯ್ದು ಆ ಹಣದಿಂದ ಹಾಯಾಗಿ ಮೆರೆಯ ಬೇಕೂ ಅಂತ ಇರುವಿಯೇನು ? ನಾಚಿಕೆ ಇಲ್ಲವೇ? ಗಂಡುಸಾದವನು ತನ್ನ ಕೈಗಳ ಕಷ್ಟದಿಂದ ಬದುಕ ಬೇಕೇ ಹೊರತು, ಇದೇನು ಮಾತಾಡುವಿ? ನೀನು ಇಷ್ಟು ಹೀನತನದವನು ಅಂತ ನಾನು ಅಂದು ಕೊಳ್ಳಿಲ್ಲ" ಎಂದಳು ತಿರಸ್ಕಾರದಿಂದ.

ತನ್ನ ಹೆಂಡತಿ ಹೇಳಿದ ಮಾತುಗಳು ರಾಮಣ್ಣ ನಿಗೆ ಚುರುಕ್ಕ್ ಚುರುಕ್ಕ್ ಎಂದು ತಗಲಿತು. ತರುವಾಯ ಎಲ್ಲರೂ ಕೂಡಿ ಮಾತಾಡಿ, ಆ ಮದುವೆ ನಡೆಯುವಂತೆ ಒಂದು ಮಧ್ಯಮ ಮಾರ್ಗವನ್ನು ಕಂಡುಕೊಂಡರು. ಅನಂತರ ಎರಡುಮೂರು ದಿನಗಳು ಅಲ್ಲಿದ್ದು ಶಾಮಣ್ಣನು ಹೆಂಡತಿಯೊಂದಿಗೆ ತನ್ನ ಮನೆಗೆ ಹಿಂದಿರುಗಿದನು. ಶಾಮಣ್ಣನು ತನ್ನ ತಮ್ಮನನ್ನು ಕರೆದು ಹೆಂಡತಿಯ ಕಿವಿಗೆ ಬೀಳುವಂತೆ, "ತಮ್ಮಾ, ನೀನು ಹೇಳಿದಂತೆ ನಮ್ಮ ತಂಗಿಗೆ ಒಳ್ಳೆಯ ವರನನ್ನೇ ಗೊತ್ತು ಮಾಡೋಣ. ಅಗತ್ಯಬಿದ್ದರೆ ಹೊಲಗದ್ದೆ ಗಳನ್ನು ಮಾರುವುದಾದರೂ ಸರಿಯೇ!" ಎಂದನು.

ಆ ಮಾತು ಕಾಳಿಂದಿಯ ಕಿವಿಗೆ ಸ್ಪಷ್ಟವಾಗಿ ಬಿದ್ದಿತು. ಅವಳು ಕಣ್ಣೀರು ತುಂಬಿಕೊಂಡು ಅವ ನನ್ನು ತೇಲುಗಣ್ಣಿನಿಂದ ನೋಡುತ್ತ, "ನನ್ನ ಮಾತಂದರೆ ನಿಮಗೆ ಲಕ್ಷ್ಯವೇ ಇಲ್ಲದಂತಾಯಿತು. ಕಡೆಗೆ ನಮ್ಮಗತಿ..." ಎನ್ನುವಾಗ, ಶಾಮಣ್ಣನು ಅವಳನ್ನು ತಡೆದು, "ಎಲ್ಲಿರುವೆ ನೀನು? ನಿನ್ನ ಮಾತಿನಂತೆ ತಾನೇ ನಾನೀಗ ಹೇಳಿದ್ದು ? ನಿನ್ನ ತೌರಿನಲ್ಲಿ ನಿನ್ನ ಅಣ್ಣನಿಗೆ ನೀನು ಹೇಳಿದ್ದು ಇದೇ ತಾನೇ? ನಿನ್ನ ಹುಟ್ಟಿದ ಮನೆಗೊಂದು ನ್ಯಾಯ, ಮೆಟ್ಟಿದ ಮನೆಗೆ ಇನ್ನೊಂದು ನ್ಯಾಯವೇ ? ನಾನು ರಟ್ಟೆ ಬಲವಿರುವ ಗಂಡುಸಲ್ಲವೆನ್ನುವಿಯಾ ?" ಎಂದನು ಜೋರಾದ ಸ್ವರದಿಂದ.

ಏನು ಹೇಳಲೂ ತೋರದೆ ಕಾಳಿಂದಿ ತಣ್ಣಗಾದಳು.






# ನಾಗಮಿತ್ರ

ಪೂರ್ವಕಾಲದಲ್ಲಿ ಬ್ರಹ್ಮದತ್ತರಾಜನು ಕಾಶೀ ರಾಜ್ಯವನ್ನು ಪಾಲಿಸುತ್ತಿದ್ದಾಗ ಬೋಧಿಸತ್ವನು ಒಬ್ಬ ಬ್ರಾಹ್ಮಣನಿಗೆ ಮಗನಾಗಿ ಹುಟ್ಟಿದನು. ತಂದೆತಾಯಿಗಳು ಸಂತೋಷಪಟ್ಟು ಆ ಮಗನಿಗೆ ಜಾತಕರ್ಮಗಳನ್ನು ಮಾಡಿಸಿ ಅವನಿಗೆ ಸತ್ಯಾನಂದ ನೆಂದು ಹೆಸರಿಟ್ಟರು. ಆಮೇಲೆ ಎರಡು ವರ್ಷದೊಳಗೆ ಆ ಬ್ರಾಹ್ಮಣ ದಂಪತಿಗಳಿಗೆ ಮತ್ತೊಬ್ಬ ಮಗನು ಹುಟ್ಟಿದನು. ಎರಡನೆಯ ಮಗನಿಗೆ ನಿತ್ಯಾನಂದನೆಂದು ಹೆಸರಿಟ್ಟು, ಎರಡು ಮಕ್ಕಳನ್ನೂ ಅಕ್ಕರೆಯಿಂದ ಬೆಳೆಯಿಸಿಕೊಂಡಿದ್ದರು.

ಅಣ್ಣತಮ್ಮಂದಿರು ಸ್ನೇಹದಿಂದ ಬೆಳೆದು ದೊಡ್ಡವ ರಾಗುತ್ತಿರಲು ತಂದೆಯೂ, ತಾಯಿಯೂ ಹಠಾತ್ತಾಗಿ ತಗಲಿದ ಯಾವುದೋ ಕೆಟ್ಟ ಅಂಟು ಜಾಡ್ಯಕ್ಕೆ ಗುರಿಯಾಗಿ ಕಾಲಧರ್ಮವನ್ನೈದಿದರು. ಅದರಿಂದ ಸತ್ಯಾನಂದ ನಿತ್ಯಾನಂದರಿಬ್ಬರಿಗೂ ಜೀವನದಲ್ಲಿ ವಿರಕ್ತಿಯುಂಟಾಯಿತು. ಅವರಿಬ್ಬರೂ ಗಂಗಾ ನದಿಯ ಆಚೆ ಬದಿಗಳಲ್ಲಿ ಕುಟೀರಗಳನ್ನು ನಿರ್ಮಿಸಿ ಕೊಂಡು, ಸನ್ಯಾಸಜೀವನದಲ್ಲಿ ತಮ್ಮ ಕಾಲವನ್ನು ಕಳೆಯತೊಡಗಿದರು.

ಹಾಗಿರುವಾಗ ಒಂದುದಿನ ಪಾತಾಳಲೋಕ ದಲ್ಲಿರುವ ಸರ್ಪರಾಜನಾದ ಮಣಿಕಾಂತನೆಂಬವನು, ಮಾನವ ರೂಪ ಧರಿಸಿ ಭೂಲೋಕಕ್ಕೆ ಬಂದು ಗಂಗಾ ತೀರದಲ್ಲಿ ನಡೆಯುತ್ತಾ ನಿತ್ಯಾನಂದನ ಕುಟೀರದಬಳಿಗೆ ಬಂದನು. ಕುಟೀರದೊಳಗಿರುವ ನಿತ್ಯಾನಂದನನ್ನು ನೋಡಿ ಮಣಿಕಾಂತನಿಗೆ ಆಶ್ಚರ್ಯ ವಾಯಿತು. ಇಷ್ಟು ಚಿಕ್ಕ ಪ್ರಾಯದಲ್ಲಿ ಸನ್ಯಾಸಿ ಯಾದನೇಕೋ ಅನಿಸಿ, ಮಣಿಕಾಂತನು ಕುಟೀರ ದೊಳಗೆ ಹೊಕ್ಕು ಅವನೊಂದಿಗೆ ತಾನು ಯಾರೆಂಬ ನಿಜಸಂಗತಿಯನ್ನು ಹೇಳಿದನು. ಆಮೇಲೆ ಇಬ್ಬರೂ ಬಹಳ ಹೊತ್ತು ಮಾತಾಡುತ್ತಾ ಹೊತ್ತುಕಳೆದರು.

ಈ ವಿಧವಾಗಿ ಸರ್ಪರಾಜನಾದ ಮಣಿಕಾಂತನಿಗೂ, ನಿತ್ಯಾನಂದನಿಗೂ ಸ್ನೇಹವೇರ್ಪಟ್ಟು ದಿನದಿಂದ ದಿನಕ್ಕೆ ಗಟ್ಟಿಯಾಗುತ್ತಾ ಹೋಯಿತು. ದಿನಾ ಮಣಿಕಾಂತನು ನಿತ್ಯಾನಂದನ ಕುಟೀರಕ್ಕೆ ಬರು ತ್ತಿದ್ದನು. ಅವರಿಬ್ಬರೂ ಎಷ್ಟೋ ಆಸಕ್ತಿಯಿಂದ ಬಗೆಬಗೆಯ ಲೋಕ ವಿಷಯಗಳನ್ನು ಕುರಿತು ಗಂಟೆ ಗಟ್ಟಲೆ ಮಾತಾಡಿಕೊಳ್ಳುತ್ತಿದ್ದರು. ಮಣಿಕಾಂತನು ಆಗಾಗ ನಿಜರೂಪ ಧರಿಸಿ ಅಗಲವಾದ ತನ್ನ



ಹೆಡೆಯನ್ನು ಬಿಚ್ಚಿ, ತಣ್ಣಗಿನ ನೆರಳಿನಲ್ಲಿ ನಿತ್ಯಾನಂದನನ್ನು ಆನಂದಗೊಳಿಸಿ, ತನ್ನ ಲೋಕಕ್ಕೆ ಹೋಗುತ್ತಿದ್ದನು.

ಹೀಗೆ ಸ್ವಲ್ಪ ಕಾಲ ನಡೆಯುತ್ತಿರಲು, ನಿತ್ಯಾನಂದನ ಮನಸ್ಸಿನೊಳಗೆ ಒಂದು ಸಂದೇಹವು ಹೊಕ್ಕಿತು, ಸರ್ಪರಾಜ ಮಣಿಕಾಂತನು ತನ್ನ ಮಿತ್ರನೆಂಬುದರಲ್ಲಿ ಏನೂ ಸಂದೇಹವಿರಲಿಲ್ಲ. ಆದರೆ ಸ್ವತಃ ಸರ್ಪಜಾತಿಯದು ದುಷ್ಟ ಸ್ವಭಾವವಾದುದರಿಂದ, ಯಾವ ಸಣ್ಣ ಕಾರಣದಿಂದಾದರೂ ಮಣಿಕಾಂತನ ವಿಷದಹಲ್ಲು ತನ್ನ ಮೇಲೆ ಊರಿಬಿಟ್ಟರೆ ಏನು ಗತಿ !

ಇಂತಹ ಆಲೋಚನೆಯಿಂದ ನಿತ್ಯಾನಂದನಿಗೆ ಚಿಂತೆ ಹಿಡಿಯಿತು. ಬಿಡಲಿಕ್ಕೂ ಆಗದೆ ಹಿಡಿಯಲಿಕ್ಕೂ ಆಗದವನಂತೆ ಮಿಡುಕತೊಡಗಿದನು. ಈ ಸ್ಥಿತಿಯಲ್ಲಿರುವಾಗ ಒಂದುದಿನ ಸತ್ಯಾನಂದನು ತಮ್ಮನನ್ನು ನೋಡಲು ನದಿ ದಾಟಿ ಬಂದನು. ತಮ್ಮನನ್ನು ನೋಡಿ ವ್ಯಾಕುಲ ಪಡುತ್ತ ಸತ್ಯಾನಂದನು, "ಇದೇನು ತಮ್ಮಾ, ಇಷ್ಟೊಂದು ಸೊರಗಿರುವೆಯಲ್ಲಾ? ಏನು ಕಾರಣ ? ಎಂದು ಕೇಳಿದನು. ಆಗ ನಿತ್ಯಾನಂದನು ಏನೂ ಮುಚ್ಚು ಮರೆಮಾಡದೆ ಇದ್ದ ಸಂಗತಿಯನ್ನೆಲ್ಲಾ ಅಣ್ಣನೊಂದಿಗೆ ಹೇಳಿದನು.

ಅದನ್ನೆಲ್ಲ ಕೇಳಿ ಸತ್ಯಾನಂದನು ಸ್ವಲ್ಪ ಹೊತ್ತು ಯೋಚಿಸಿ, "ತಮ್ಮಾ, ನೀನು ಹೇಳಿದ ಸಮಾಚಾರ ಕೇಳುವಾಗ ಆ ಸರ್ಪರಾಜನನ್ನು ನೀನು ಪ್ರಾಣಮಿತ್ರನಾಗಿ ಭಾವಿಸುವ ಹಾಗಿದೆ. ಆದರೂ ಮತ್ತೊಂದು ಕಡೆಯಲ್ಲಿ ಅವನಿಂದೇನಾದರೂ ಘಾತವಾಗುವುದೇನೋ ಎಂದು ಅಂಜುವ ಹಾಗೂ ಕಾಣುತ್ತದೆ. ಹೀಗಿರುವಾಗ ಅವನು ನಿನ್ನ ಬಳಿಗೆ ಬಾರದೇ ಇದ್ದರೆ ನಿನಗೆ ನೆಮ್ಮದಿ ಬರುವುದೆಂದು ಕಾಣುತ್ತದೋ ? ಯೋಚಿಸಿ ಹೇಳು ನೋಡುವಾ" ಎಂದನು.

ನಿತ್ಯಾನಂದನು ಸ್ವಲ್ಪಹೊತ್ತು ಆಲೋಚಿಸಿ "ಹೌದಣ್ಣ. ಅವನು ನನ್ನ ಬಳಿಗೆ ಬಾರದಿದ್ದರೇನೇ ನನ್ನ ಮನಸ್ಸಿಗೆ ನೆಮ್ಮದಿ ಬರುವ ಹಾಗೆ ಕಾಣುತ್ತದೆ. ಆದರೆ ಅವನ ಹತ್ತಿರ ನನ್ನ ಬಳಿಗೆ ಬರಬೇಡವೆಂದು ಹೇಗೆ ಹೇಳಲಿ ? ಹಾಗೆ ಹೇಳಲು ನನ್ನಿಂದಾಗುವುದಿಲ್ಲ" ಎಂದನು.

ಆದನ್ನು ಕೇಳಿ ಸತ್ಯಾನಂದನು ಮುಗುಳುನಕ್ಕು "ಸರಿಬಿಡು, ಆ ಸರ್ಪರಾಜನು ನಿನ್ನ ಬಳಿಗೆ ಬರುವಾಗ ಎಂತೆಂತಹ ಆಭರಣಗಳನ್ನು ಧರಿಸುತ್ತಾನೆ ?" ಎಂದು ಕೇಳಿದನು.

"ಅವನ ಶರೀರದ ಮೇಲೆ ಆಭರಣಗಳಿಗೇನೂ ಕಡಿಮೆಯಿಲ್ಲ. ಆದರೆ ಎಲ್ಲದಕ್ಕಿಂತಲೂ ಕಣ್ಣಿಗೆ ಜಗ್ಗನೆ ಕಾಣುವಹಾಗೆ ಒಂದು ಮಣಿ ಅವನ ಕೊರಳಿನಲ್ಲಿದೆ. ಅವನು ಅಷ್ಟು ದೂರ ಬರುವಾಗಲೇ ಅದು ಕಣ್ಣಿಗೆ ಹೊಡೆಯುತ್ತದೆ" ಎಂದನು ನಿತ್ಯಾನಂದ.

"ತಮ್ಮಾ, ಹಾಗಾದರೆ ಒಂದು ಕೆಲಸಮಾಡು, ಈಸಾರಿ ಆ ಸರ್ಪರಾಜನು ನಿನ್ನ ಬಳಿಗೆ ಬಂದಾಗ ಆ ಮಣಿಯನ್ನು ಕೊಡಬೇಕೆಂದು ಕೇಳು" ಎಂದನು ಸತ್ಯಾನಂದ.

ಎರಡು ದಿನಗಳ ಮೇಲೆ ಸರ್ಪರಾಜ ಮಣಿಕಾಂತನು ನಿತ್ಯಾನಂದನ ಬಳಿಗೆ ಬಂದನು. ಬಂದ ಕೂಡಲೇ ನಿತ್ಯಾನಂದನು, "ಮಿತ್ರ ಮಣಿಕಾಂತಾ, ಈ ದಿನ ನಾನೊಂದು ವಸ್ತುವನ್ನು ಕೇಳುತ್ತೇನೆ. ಮತ್ತೇನಿಲ್ಲ, ನಿನ್ನ ಕಂಠಹಾರದ ಮಣಿ ನನಗೆ ಬೇಕು. ಕೊಡುವೆಯಾ ? " ಎಂದನು.

ಮಣಿಕಾಂತನು ಅದಕ್ಕೇನೂ ಹೇಳದೆ ನಿತ್ಯಾನಂದನ ಕುಟೀರದಲ್ಲಿ ಕುಳಿತುಕೊಳ್ಳದೆಯೇ ತನ್ನ ಲೋಕಕ್ಕೆ ಹೋಗಿಬಿಟ್ಟನು.

ಮರುದಿನ ಮಣಿಕಾಂತನು ಅಲ್ಲಿಗೆ ಬಂದಕೂಡಲೇ ನಿತ್ಯಾನಂದನು "ನಿನ್ನೆ ನಿನ್ನ ಕೊರಳಲ್ಲಿರುವ ಹೊಳೆಯುವ ಮಣಿಯನ್ನು ಕೇಳಿದೆನು. ಏನೂ ಹೇಳದೆ ಮಣಿಯನ್ನೂ ಕೊಡದೆ ಹೋಗಿಬಿಟ್ಟೆಯಲ್ಲಾ ? " ಎಂದನು. ಆಗಲೂ ಮಣಿಕಾಂತನು ಏನೂ ಹೇಳದೆ ಬಾಗಿಲ ಹತ್ತಿರದಿಂದಲೇ ಹಿಂದಿರುಗಿ ಹೋಗಿಬಿಟ್ಟನು.

ಮೂರನೇ ದಿನ ಮಣಿಕಾಂತನು ನಿತ್ಯಾನಂದನ ಕುಟೀರವನ್ನು ಸಮೀಪಿಸುವಾಗಲೇ, ನಿತ್ಯಾನಂದನು ಅವನಿಗೆ ಇದಿರಾಗಿ ಹೋಗಿ, "ಆ ನಿನ್ನ ಮಣಿಯನ್ನು ಕೊಡಬೇಕೆಂದು ಎರಡು ಸಾರಿ ಕೇಳಿದೆನು. ಇದೀಗ ಮೂರನೇ ಸಾರಿ ಕೇಳುತ್ತೇನೆ. ಇಂದಾದರೂ ಅದನ್ನು ಕೊಡುವೆಯಾ ? " ಎಂದು ಕೇಳಿದನು.

ಸರ್ಪರಾಜ ಮಣಿಕಾಂತನು ಚಿಂತೆಯ ಮುಖದಿಂದ, "ಒಂದೆರಡಲ್ಲ ಮೂರು ಸಾರಿ ಕೇಳಿದ ಮೇಲೆಯೇ ಉತ್ತರ ಕೊಡೋಣವೆಂದು ಸುಮ್ಮನಿದ್ದೆನು. ಒಂದೇ ಸಾರಿ ಕೊಡುವುದಿಲ್ಲವೆಂದರೆ ಮತ್ತೆ ನಿನ್ನ ಬಳಿಗೆ ಬರಲಾಗದಷ್ಟೆ ? ಅದಕ್ಕೇ ಇವತ್ತಿನವರೆಗೆ ತಡೆದೆನು. ಇದು ಸಾಮಾನ್ಯ ಮಣಿಯಲ್ಲ. ಏನು ಕೇಳಿದರೂ ಕೊಡುವ ಕಾಮಧೇನುವಂತಹುದು. ಇದನ್ನು ಎಂದಿಗೂ ಕೊಡಲಾರೆನು. ಇನ್ನು ಮೇಲೆ ನಿನ್ನ ಕುಟೀರದ ನೆರಳಿಗೂ ಬರಲಾರೆನು" ಎಂದು



ಹೇಳಿ ಹಿಂದಿರುಗಿ ಹೊರಟುಹೋದನು. ಮುಂದೆ ಒಂದು ವಾರ ಕಳೆಯಿತು. ಮಣಿಕಾಂತನು ತನ್ನ ಬಳಿಗೆ ಬಾರದಿರುವುದರಿಂದ ನಿತ್ಯಾನಂದನಿಗೆ ಏನನ್ನೋ ಮುಖ್ಯವಾದುದನ್ನು ಕಳೆದುಕೊಂಡಂತೆ ಪಿಟ್ಟೆನಿಸಹತ್ತಿತು. ತಾನು ಒಬ್ಬ ಪ್ರಾಣಮಿತ್ರನನ್ನು ಸುಮ್ಮಸುಮ್ಮನೆ ಕಳೆದುಕೊಂಡೆನೋ ಎಂದು ಪಶ್ಚಾತ್ತಾಪಕ್ಕೆ ತೊಡಗಿದನು. ದೊಡ್ಡ ಪಾಪ ಮಾಡಿದವನಂತೆ ನೊಂದುಕೊಳ್ಳುತ್ತ ಸೊರಗಿ ಶಲ್ಯದಂತಾಗ ತೊಡಗಿದನು. ಈ ಸ್ಥಿತಿಯಲ್ಲಿ, ಈಗ ತನ್ನತಮ್ಮನು ಹೇಗಿರುವನೋ ಎಂದು ನೋಡಲು ಸತ್ಯಾನಂದನು ಒಂದು ದಿನ ನಿತ್ಯಾನಂದನ ಬಳಿಗೆಬಂದು, “ಇದೇನು ತಮ್ಮಾ? ಮೊದಲಿಗಿಂತಲೂ ತುಂಬಾ ಸೊರಗಿ ಹೋಗಿರುವೆಯಲ್ಲಾ ? ನಾನು ಹೇಳಿದ ಹಾಗೆ ಮಾಡಲಿಲ್ಲವೆ ? ಸರ್ಪ ರಾಜನ ಪೀಡೆ ಇನ್ನೂ ನಿನ್ನನ್ನು ಬಿಟ್ಟಿಲ್ಲವೇ ?” ಎಂದು ಕೇಳಿದನು.

“ಅಣ್ಣಾ, ನೀನು ಹೇಳಿದಂತೆ ಆ ಸರ್ಪರಾಜನ ಹತ್ತಿರ ಆ ಮಣಿ ನನಗೆ ಬೇಕೆಂದು ಕೇಳಿದೆ. ಕೊಡಲಾಗುವುದಿಲ್ಲವೆಂದು ಹೇಳಿ ಹೋಗಿಬಿಟ್ಟ, ಆ ದಿನದಿಂದ ಅವನು ಇಲ್ಲಿಗೆ ಬರುವುದನ್ನೇ ಬಿಟ್ಟಿದ್ದಾನೆ, ಅವನು ಈ ಕುಟೀರಕ್ಕೆ ಬಂದು ನನ್ನೊಂದಿಗೆ ಮಾತಾಡುತ್ತ ನನ್ನ ತಲೆಯ ಮೇಲೆ ಹೆಡೆಯನ್ನು ಆಡಿಸುವಾಗ ನನಗೆ ತುಂಬಾ ಆನಂದವಾಗುತ್ತಿತ್ತು. ಈಗ ನನಗೆ ಹುಚ್ಚು ಹಿಡಿದ ಹಾಗಾಗಿದೆ. ಕಾರಣವೇನಿಲ್ಲದೆ ಒಳ್ಳೆಯ ಮಿತ್ರನನ್ನು ಸುಮ್ಮನೆ ಕಳೆದುಕೊಂಡೆನಲ್ಲಾ ಅನಿಸುತ್ತದೆ. ಅದಕ್ಕೇ ಹೀಗೆ ಸೊರಗುತ್ತಿದ್ದೇನೆ” ಎಂದನು ನಿತ್ಯಾನಂದ.

ಅದನ್ನು ಕೇಳಿ ಬೋಧಿಸತ್ವನಾದ ಅಣ್ಣ ಸತ್ಯಾನಂದನು, “ಅಸಲು ಅವನು ಒಳ್ಳೆಯ ಮಿತ್ರನೆಂಬ ನಿನ್ನ ನಂಬುಗೆಯೇ ತಪ್ಪು ತಿಳುವಳಿಕೆ. ಅವನು ನಿನ್ನ ಪ್ರಾಣಮಿತ್ರನೆಂದುಕೊಂಡು ನೀನು ಸಂತೋಷ ಪಡುತ್ತಿದ್ದೆ. ಅಂಥಾ ಪ್ರಾಣಸ್ನೇಹಿತನು ಒಂದು ಮಣಿಯನ್ನು ನೀನು ಕೇಳಿದುದಕ್ಕೆ ನಿನ್ನ ಮುಖ ನೋಡುವುದನ್ನೇ ಬಿಟ್ಟಿದ್ದಾನೆ. ಪ್ರಾಣಮಿತ್ರನಾದವನು ಹಾಗೆ ಮಾಡುತ್ತಾನೇನು ? ಅವನು ಸ್ವಾರ್ಥ ಪರನು. ನಿಜವಾದ ಸ್ನೇಹಿತನೇ ಅಲ್ಲ. ಸುಮ್ಮನೆ ಹೊತ್ತು ಕಳೆಯಲು ನಿನ್ನ ಬಳಿಗೆ ಬರುತ್ತಿದ್ದ. ಅವನು ಬಾರದಿರುವುದಕ್ಕೆ ಚಿಂತಿಸಲೇ ಬೇಡ” ಎಂದು ಹಿತಬೋಧೆ ಮಾಡಿದನು.

ಅಣ್ಣನ ಮಾತಿನೊಳಗಿನ ಸತ್ಯವನ್ನು ತಿಳಿದು ನಿತ್ಯಾನಂದನ ಚಿಂತೆಯ ಭಾರವು ಇಳಿದು ಹೋಯಿತು. ಆಮೇಲೆ ಅವನು ಸರ್ಪರಾಜನನ್ನು ಕುರಿತು ಆಲೋಚಿಸಲೇ ಇಲ್ಲ. ಅವನ ದೇಹಾರೋಗ್ಯವೂ ಸರಿಯಾಯಿತು.






# ಯುವಾನ್ ಚ್ವಾಂಗನ ಯಾತ್ರೆಗಳು—೨

ಗಂಗಾ ಯಮುನಾ ನದಿಗಳ ಸಂಗಮ ಸ್ಥಾನವಾದ ಪ್ರಯಾಗ ನಗರವು ಯುವಾನ್ ಚ್ವಾಂಗನನ್ನು ಮಂತ್ರಮುಗ್ಧ ಗೊಳಿಸಿತು. ಆ ಸಂಗಮ ತೀರ್ಥನದೀ ಜಲದಲ್ಲಿ ಸ್ನಾನ ಮಾಡುವ ಸಾವಿರಾರು ಯಾತ್ರಿಕರನ್ನು ಮಾತ್ರವಲ್ಲದೆ, ಕೋತಿಗಳ ಗುಂಪು, ಜಿಂಕೆಗಳ ಗುಂಪು ಕೂಡಾ ಅಲ್ಲಿ ಸ್ನಾನ ಮಾಡುವುದನ್ನು ನೋಡಿದನು.

ಅಲ್ಲಿಂದ ಯುವಾನ್‌ಚ್ವಾಂಗ್ ಪ್ರಸಿದ್ಧ ಬೌದ್ಧ ವಿಶ್ವವಿದ್ಯಾನಿಲಯದ ಕೇಂದ್ರವೆನಿಸಿದ ನಲಂದಾಕ್ಕೆ ಹೋದನು. ಅಲ್ಲಿ ಇನ್ನೂರುಮಂದಿ ಪಂಡಿತರು ಆತನನ್ನು ಹೂಮಾಲೆಗಳಿಂದ ಸತ್ಕರಿಸಿ ಪ್ರಧಾನ ದ್ವಾರದ ಮೂಲಕ ವಿದ್ಯಾಲಯದೊಳಗೆ ಕರೆದೊಯ್ದರು.





ನೂರ ಆರು ವರ್ಷ ಪ್ರಾಯದ ಹಣ್ಣು ಮುದುಕನಾದ ಶೀಲಭದ್ರನು ಅಲ್ಲಿಯ ಪ್ರಧಾನಾಚಾರ್ಯನಾಗಿದ್ದನು. ಆತನು ತನ್ನ ಅನಾರೋಗ್ಯವನ್ನೂ ವಾರ್ಧಕ್ಯವನ್ನೂ ಲೆಕ್ಕಿಸದೆ ಸ್ವಯಂ ಬಂದು ಚ್ವಾಂಗನನ್ನು ಕರೆದೊಯ್ಯುತ್ತ ವಿದ್ಯಾಲಯದ ವಿವಿಧ ಶಾಖೆಗಳನ್ನು ತೋರಿಸಿದನು. ಚ್ವಾಂಗನ ಬರುವಿಕೆಯನ್ನು ಕುರಿತು ತಾನು ಸ್ವಪ್ನದ ಮೂಲಕ ಹೇಗೆ ತಿಳಿದುಕೊಂಡೆನೆಂಬುದನ್ನೂ ಚ್ವಾಂಗನಿಗೆ ವಿವರಿಸಿದನು.



ಈ ವಿದ್ಯಾಲಯವು ಅನೇಕ ಭವನಗಳಿಂದ ಸ್ತೂಪಗಳಿಂದ ಕಣ್ಣಿಗೆ ಔತಣವಾಗುವಂತಿದ್ದಿತು. ಅದರ ಸುತ್ತಲೂ ಅಲ್ಲಲ್ಲಿ ತಾವರೆ ಹೂವುಗಳಿಂದ ಕಳಕಳಿಸುವ ಸರೋವರಗಳಿದ್ದುವು. ಎಂಬತ್ತು ಅಡಿ ಎತ್ತರದ ತಾಮ್ರದ ಬುದ್ಧನ ವಿಗ್ರಹವಿದ್ದಿತು. ಈ ವಿದ್ಯಾಲಯದಲ್ಲಿ ಶಿಕ್ಷಣ ಪಡೆಯಲು ಟಿಬೆಟ್‌ನಿಂದಲೂ, ಶ್ರೀಲಂಕ, ಜಾವಾದ್ವೀಪಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಒಂಬತ್ತು ಅಂತಸ್ತುಗಳಿರುವ ಆ ಭವನದಲ್ಲಿ ದೊಡ್ಡ ಗ್ರಂಥಾಲಯ ಕೂಡಾ ಇದ್ದಿತು.

ಒಂದು ದಿನ ರಾತ್ರಿ ಯುವಾನ್‌ಚ್ವಾಂಗ್ ಒಂದು ವಿಚಿತ್ರ ಸ್ವಪ್ನ ನೋಡಿದನು. ವಿದ್ಯಾಲಯದ ಭವನಗಳೆಲ್ಲಾ ಸರ್ವನಾಶವಾಗಿ ಉಳಿದಿದ್ದ ಒಂದೇ ಒಂದು ಶಿಥಿಲ ಭವನದ ಕೊಠಡಿಯೊಳಗೆ ಪಶುಗಳು ಮೇಯುವುದನ್ನು ಆ ಸ್ವಪ್ನದಲ್ಲಿ ನೋಡಿದನು.





ಅಷ್ಟೇ ಅಲ್ಲದೆ ಸ್ವಪ್ನದಲ್ಲಿ ಅವನಿಗೊಬ್ಬ ದಿವ್ಯ ಪುರುಷನು ಕಾಣಿಸಿ, ದೂರದಲ್ಲಿ ಉರಿಯುವ ಬೆಂಕಿಯನ್ನು ತೋರಿಸಿ, ಸಾಧ್ಯವಾದಷ್ಟು ಬೇಗ ಹಿಂದಿರುಗಿ ಹೋಗೆಂದು ಚ್ವಾಂಗನಿಗೆ ಆದೇಶ ಮಾಡಿದನು. ಚ್ವಾಂಗ್ ನಲಂದಾದಿಂದ ಹೊರಟು ಹೋದಮೇಲೆ ನಿಜಕ್ಕೂ ನಲಂದಾವು ಭಾರೀ ಬೆಂಕಿಯ ಅನಾಹುತಗಳಿಗೆ ಗುರಿಯಾಯಿತು.



ಒಂದಾನೊಂದು ಗುಡ್ಡದ ಮೇಲೆ ಗಂಧದ ಕೊರಡುಗಳಿಂದ ತಯಾರಿಸಿದ ಬುದ್ಧನ ವಿಗ್ರಹ ವಿದ್ದಿತು. ಯಾರಾದರೂ ಆ ವಿಗ್ರಹದ ಮೇಲೆ ಹೂಮಾಲೆಯನ್ನು ಬೀಸಿ ಒಗೆದಾಗ, ಅದು ವಿಗ್ರಹದ ಕೈಗಳಲ್ಲಿ ಸಿಕ್ಕಿ ನೇತಾಡಿದರೆ, ಬಿಸುಟವನ ಕೋರಿಕೆಗಳು ಫಲಿಸುತ್ತವೆ ಎನ್ನುತ್ತಿದ್ದರು. ಚ್ವಾಂಗ್ ತಾನು ನಿಜವಾದ ಭಕ್ತನಾಗಿ ಬದುಕಲು ಎಣಿಸಿದ್ದೇನೆಂದು ಅಂದುಕೊಂಡು ಆ ವಿಗ್ರಹದ ಮೇಲೆ ಮೂರು ಮಾಲೆಗಳನ್ನು ಬೀಸಿ ಒಗೆದನು. ಒಂದು ಮಾಲೆ ಆ ವಿಗ್ರಹದ ಕೊರಳಲ್ಲಿಯೂ ಉಳಿದೆರಡು ವಿಗ್ರಹದ ಕೈಗಳಲ್ಲಿಯೂ ನೇತಾಡಿದುವು.

ಆ ಕಾಲದಲ್ಲಿ ಚಕ್ರವರ್ತಿಗಳಾದ ಪುಲಕೇಶಿ ಮತ್ತು ಹರ್ಷವರ್ಧನರ ನಡುವೆ ಆಗಾಗ ಯುದ್ಧಗಳು ನಡೆಯುತ್ತಿದ್ದುವು. ಪುಲಕೇಶಿಯ ಪಕ್ಷದವರು ಆನೆಗಳಿಗೆ ಮದ ಹಿಡಿಸಿ ಅವುಗಳನ್ನು ಶತ್ರುಗಳ ಮೇಲೆ ಕೆರಳಿಸಿ ಬಿಟ್ಟು ಹೇಗೆ ಗೊಂದಲ ಮಾಡಿಸುವರೆಂಬ ವಿವರಗಳನ್ನು ಚ್ವಾಂಗ್ ಬರೆದಿಟ್ಟಿದ್ದಾನೆ.





ಹರ್ಷವರ್ಧನನು ಚ್ವಾಂಗನನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿದನು. ಅವನೂ ಅವನ ತಂಗಿ ರಾಜಶ್ರೀಯೂ ಚ್ವಾಂಗನ ಆಗಮನ ಸಂದರ್ಭದಲ್ಲಿ ದೊಡ್ಡ ಉತ್ಸವದ ಏರ್ಪಾಡು ಮಾಡಿದರು. ಹರ್ಷವರ್ಧನನ ಜ್ಞಾನ ತೃಷ್ಣೆಯನ್ನು ನೋಡಿ ಚ್ವಾಂಗನು ಸಂತೋಷ ಪಟ್ಟಿರುವನು.



ಹರ್ಷವರ್ಧನನು ತನ್ನ ರಾಜಧಾನಿ ಕನ್ಯಾಕುಬ್ಜ ದಲ್ಲಿ ಸಾಮಂತರಿಂದ, ಕವಿಗಳಿಂದ, ಪಂಡಿತರಿಂದ್ಜ ಪುರಪ್ರಮುಖರಿಂದ ಕೂಡಿದ ಮಹಾಸಭೆ ಯನ್ನು ಕರೆದನು. ಯುವಾನ್‌ಚ್ವಾಂಗ್ ಸಭೆಯವರೆಲ್ಲಾ ಮೆಚ್ಚುವ ಹಾಗೆ ಮಹಾಯಾನ ಬೌದ್ಧವನ್ನು ಕುರಿತು ಉಪನ್ಯಾಸ ಮಾಡಿದನು.

ಮಹಾಸಭೆಯ ಕೊನೆಯ ದಿನದಲ್ಲಿ ಯಾವನೋ ಒಬ್ಬನು ಹರ್ಷವರ್ಧನನನ್ನು ಕತ್ತಿಯಿಂದ ತಿವಿಯಲು ನೋಡಿದನು. ಹರ್ಷವರ್ಧನನು ತಪ್ಪಿಸಿಕೊಂಡು, ಆ ದುಷ್ಟನು ಬೀಳುವ ಹಾಗೆ ಹೊಡೆದನು. ಆಮೇಲೆ ವಿಚಾರಿಸಲು ಹರ್ಷ ವರ್ಧನನು ಅವನನ್ನು ಕ್ಷಮಿಸಿ ಬಿಟ್ಟುಬಿಟ್ಟನು.





ತಕ್ಷಶಿಲೆ, ಕಾಶ್ಮೀರ ಪ್ರಾಂತವಾಗಿ ಯುವಾನ್ ಚ್ವಾಂಗ್ ಚೈನಾದೇಶಕ್ಕೆ ಹಿಂದಿರುಗಿದನು. ಭಾರತದೇಶಕ್ಕೆ ಒಂಟಿಯಾಗಿ ಬಂದ ಚ್ವಾಂಗ್, ಸ್ವದೇಶಕ್ಕೆ ಹಿಂದಿರುಗುವಾಗ ನೂರುಮಂದಿ ಅಂಗರಕ್ಷಕರೊಂದಿಗೆ, ಇಪ್ಪತ್ತು ಕುದುರೆಗಳ ಮೇಲೆ ಬೌದ್ಧಮತ ಗ್ರಂಥಗಳು, ಪ್ರತಿಮೆಗಳು, ಚಿತ್ರಗಳೊಂದಿಗೆ ಪ್ರಯಾಣ ಮಾಡಿದನು. ಚೈನಾ ಚಕ್ರವರ್ತಿ ತಾಯ್ ಚುಂಗ್ ಅವನನ್ನು ಘನವಾಗಿ ಸನ್ಮಾನಿಸಿದನು.

# ಅಲ್ಪಬುದ್ಧಿ

ಶಿವರಾಮನು ನಗರದಲ್ಲಿ ಉದ್ಯೋಗಸ್ಥನಾಗಿದ್ದರೂ ಆಶೆಯಲ್ಲೊಂದು ನ್ಯಾಯ ನಡೆಸುವವನು. ಒಂದು ದಿನ ಅವನು ತನ್ನ ಮಿತ್ರರೊಂದಿಗೆ ಗಾಳಿ ಸೇವನೆಗೆ ಹೊರಟು ರಾಜಬೀದಿಯಲ್ಲಿ ಹಿಂದಿರುಗುವಾಗ ದಾರಿಯಲ್ಲಿ ಬಿದ್ದ ಒಂದು ಗಂಟು ಅವನಿಗೆ ಸಿಕ್ಕಿತು.

ಅದರಲ್ಲಿ ಸಾವಿರ ರೂಪಾಯಿಗಳಿದ್ದುವು. ಇದನ್ನು ಒಯ್ದು ಕೋತ್ವಾಲ ಕಚೇರಿಯಲ್ಲಿ ಕೊಟ್ಟರೆ, ಕಳೆದುಕೊಂಡವರಿಗೆ ತಲಪುತ್ತದೆಂದು ಮಿತ್ರರು ಹೇಳಿದರು. ಆದರೆ ಶಿವರಾಮನು ಅದಕ್ಕೆ ಒಪ್ಪದೆ, ಆ ಸಾವಿರ ರೂಪಾಯಿಗಳನ್ನೂ ತನ್ನೊಂದಿಗಿರುವವರೊಂದಿಗೆ ತಾನೂ ಸೇರಿ ಹಂಚಿಕೊಂಡನು. ಅವನು ಮಾಡಿದ ಕೆಲಸ ಮಿತ್ರರಿಗೆ ಹಿಡಿಸದಿದ್ದರೂ, ಅವನ ಪದವಿ ದೊಡ್ಡದಾದುದರಿಂದ ಸುಮ್ಮನಿದ್ದರು.

ಶಿವರಾಮನು ಮನೆಗೆ ಹೋದಾಗ, ಅವನ ಅತ್ತೆ ಮನೆಗೆ ಬಂದಿದ್ದಳು. ಅವಳು ಅಳಿಯ ಶಿವರಾಮನನ್ನು ನೋಡಿದ ಕೂಡಲೇ "ಈ ಸಾರಿ ಹಬ್ಬಕ್ಕೆ ನಿನಗೇನೂ ಕೊಡದೆ ಹೋದೆನಲ್ಲಾ ಅಂದುಕೊಂಡು, ಹೊಸ ಬಟ್ಟೆ ಕೊಂಡುಕೊಳ್ಳಲು ಸಾವಿರ ರೂಪಾಯಿ ತಂದಿದ್ದೇನೆ. ನಿನಗೆ ಬೇಕಾದ್ದು ತಗೋಪ್ಪಾ" ಎಂದು ಹೇಳಿ ಚೀಲ ದೊಳಗೆ ಕೈ ಹಾಕಿ ಹುಡುಕಿ, "ಅಯ್ಯೋ, ಹಣದ ಗಂಟು ಗಾಡಿಯಿಂದ ಜಾರಿಬಿತ್ತೆಂದು ಕಾಣುತ್ತೆ. ಬೇಗ ಹೋಗಿ ಕೊತ್ವಾಲ ಕಚೇರೀಲಿ ಹೇಳಿಬಾರಪ್ಪಾ" ಎಂದಳು.

ಅತ್ತೆಯ ಮಾತು ಕೇಳಿ ಶಿವರಾಮ ಮರಗಟ್ಟಿ ನಿಂತ.





# ದುರ್ಜನರ ಸ್ನೇಹ

**ಒಂ**ದಾನೊಂದು ಊರಿನಲ್ಲಿ ಒಬ್ಬ ಸನ್ಯಾಸಿ ವಾಸವಾಗಿದ್ದನು. ಅವನು ಊರಿನ ಕೊನೆಯಲ್ಲಿ ಒಂದು ಕುಟೀರದಲ್ಲಿ ಹೆಚ್ಚಾಗಿ ಧ್ಯಾನಮಗ್ನನಾಗಿಯೇ ಇರುವನು. ಅವನ ಭಕ್ತರು ಕೆಲವರು ದಿನಾ ಹಣ್ಣುಗಳನ್ನೂ ಹಾಲನ್ನೂ, ಮತ್ತೇನಾದರೂ ಊಟದ ಪದಾರ್ಥಗಳನ್ನೂ ತಂದು ಸಮರ್ಪಿಸಿ ಹೋಗುತ್ತಿದ್ದರು. ಹೀಗೆಯೇ ಅವನ ದಿನಗಳು ಸಾಗುತ್ತಿದ್ದುವು. ಒಂದೊಂದು ದಿನ ಯಾರೂ ಏನೂ ತಂದು ಕೊಡದಿದ್ದರೆ ಅವನು ಅದಕ್ಕಾಗಿ ಚಿಂತಿಸದೆ, ಹಸಿವನ್ನು ಮರೆತು ಧ್ಯಾನಮಾಡಿಕೊಂಡಿರುವನೇ ಹೊರತು, ಅದಕ್ಕಾಗಿ ಯಾಚಿಸುತ್ತಿರಲಿಲ್ಲ. ಹೀಗೆ ಒಂದೊಂದು ದಿನ ಆ ಸನ್ಯಾಸಿಗೆ ಉಪವಾಸವೇ ಗತಿಯಾಗುವುದೆಂದು ತಿಳಿದು ಒಬ್ಬ ಭಕ್ತನು ಒಂದು ಎಮ್ಮೆಯನ್ನು ತಂದು ಸನ್ಯಾಸಿಗೆ ಸಮರ್ಪಿಸಿದನು. ಅದು ಆ ಕುಟೀರದ ಒಂದು ಬದಿಯಲ್ಲಿ ಸನ್ಯಾಸಿಗೆ ಹಾಲು ಕೊಡುತ್ತಾ ಇದ್ದಿತು. ಅದನ್ನು ಕರೆಯಲಿಕ್ಕೂ, ಅದಕ್ಕೆ ಹುಲ್ಲು ನೀರು ಹಾಕಲಿಕ್ಕೂ ಆ ದಾತನೇ ಆಳನ್ನು ನಿಯಮಿಸಿದ್ದನು. ಒಂದುದಿನ ಏನಾಯಿತೆಂದರೆ, ಸನ್ಯಾಸಿಯ ಎಮ್ಮೆಯನ್ನು ಅಪಹರಿಸಿಕೊಂಡು ಹೋಗಬೇಕೆಂದು ಒಬ್ಬ ಕಳ್ಳನಿಗೆ ತೋರಿತು. ಅದನ್ನು ಕದ್ದುಕೊಂಡು ಹೋಗುವುದು ತುಂಬಾ ಸುಲಭವಾಗಿತ್ತು. ಸನ್ಯಾಸಿಯ ಕುಟೀರವಿರುವುದೇ ಊರಿನ ಹೊರಭಾಗದಲ್ಲಿ. ಕುಟೀರಕ್ಕೆ ಬಾಗಿಲು ಚಿಲಕವೂ ಇಲ್ಲ. ಹೆಚ್ಚಿನ ರಕ್ಷಣೆಯೂ ಇಲ್ಲ. ಸನ್ಯಾಸಿ ನಿದ್ದೆಯಲ್ಲಿರುವಾಗ ಆ ವಠಾರದೊಳಗೆ ಹೊಕ್ಕು ಎಮ್ಮೆಯನ್ನು ಬಿಚ್ಚಿ ನಿಶ್ಚಿಂತೆಯಿಂದ ಎಳೆದುಕೊಂಡು ಹೋಗಿಬಿಡಬಹುದು. ಆದುದರಿಂದ ಒಂದು ದಿನ ಕತ್ತಲೆಯ ರಾತ್ರಿಯಲ್ಲಿ ಆ ಕಳ್ಳನು ಸನ್ಯಾಸಿಯ ಕುಟೀರದ ಕಡೆಗೆ ನಡೆದನು.

ದಾರಿಯಲ್ಲಿ ಆ ಕಳ್ಳನ ಹಿಂದೆ ಮತ್ತೊಬ್ಬನು ಗಂಟು ಬಿದ್ದು ಅವನ ಹಿಂದೆಯೇ ನಡೆಯತೊಡಗಿದನು.

"ಯಾರು ನೀನು ? ನನ್ನ ಹಿಂದೆ ಏಕೆ ಬರುತ್ತೀ? ನಾನು ಒಂದು ಮುಖ್ಯ ಕೆಲಸದ ಮೇಲೆ ಹೋಗುತ್ತಿದ್ದೇನೆ. ಬೇರೆ ಯಾರೂ ನನ್ನ ಹಿಂದೆ ಬರುವುದು ನನಗೆ ಹಿಡಿಸದು. ಆದ್ದರಿಂದ ನೀನು ಬೇರೆ ದಾರಿ ಹಿಡಿ. ಹೋಗು" ಎಂದನು ಕಳ್ಳ.

ಅದಕ್ಕೆ ಎರಡನೆಯವನು, "ನಾನು ಕೂಡಾ ನೀನು ಹೋಗುವಲ್ಲಿಗೇ ಹೊರಟಿದ್ದೇನೆ. ನಾನು ಮನುಷ್ಯನಲ್ಲ, ಭೂತ. ಊರ ಹೊರಗಿನ ಕುಟೀರ ದಲ್ಲಿ ಒಬ್ಬ ಸನ್ಯಾಸಿ ಇದ್ದಾನಷ್ಟೆ? ಅವನು ಈ ಊರಿಗೆ ಬಂದಂದಿನಿಂದಲೂ ಜನರೆಲ್ಲ ಒಳ್ಳೆಯ ವರಾಗಿದ್ದಾರೆ. ಆದ್ದರಿಂದ ನನ್ನ ಕೆಲಸ ಪೂರಾ ನಿಂತು ಹೋಗಿದೆ. ಊರೊಳಗೆ ಅನ್ಯಾಯಗಳೂ, ಅಕ್ರಮ ಗಳೂ, ದೌರ್ಜನ್ಯಗಳೂ ಇಲ್ಲವೇಇಲ್ಲ. ಆದ್ದರಿಂದ ಈ ಸನ್ಯಾಸಿಯನ್ನು ಕೊಂದು ನನ್ನ ಆಧಿಕ್ಯತೆಯನ್ನು ಸಾಧಿಸಬೇಕಾಗಿದೆ. ನೀನು ಕೂಡಾ ಅಲ್ಲಿಗೇ ಹೊರಟು ಹಾಗಿದೆ. ಏಕೋ?" ಎಂದಿತು ಭೂತ.

"ನನ್ನ ವೃತ್ತಿ ಕಳ್ಳತನ. ನಾನೂ ಆ ಸನ್ಯಾಸಿಯ ಕುಟೀರಕ್ಕೆ ಹೋಗುತ್ತೇನೆ. ಆದರೆ ನನ್ನ ಉದ್ದೇಶ ಸನ್ಯಾಸಿಯನ್ನು ಕೊಲ್ಲುವುದೇನಲ್ಲ. ಅಂಥ ಕೆಲಸ ನನ್ನಿಂದಾಗದು. ಆ ಸನ್ಯಾಸಿಗೆ ಒಬ್ಬರು ಭಕ್ತರು ಒಂದು ಒಳ್ಳೇ ಎಮ್ಮೆಯನ್ನು ಕೊಟ್ಟಿದ್ದಾರೆ. ಅದನ್ನು ಕದ್ದು ಕೊಂಡು ಹೋಗಬೇಕು, ಅಷ್ಟೇ" ಎಂದನು ಕಳ್ಳ.

ಭೂತವೂ ಕಳ್ಳನೂ ಸನ್ಯಾಸಿಗೆ ಹಾನಿಮಾಡಲು ಒಂದೇ ಕಡೆಗೆ ಹೋಗುವವರಾದುದರಿಂದ ಅವರೊಳಗೆ ಕೂಡಲೇ ಸ್ನೇಹವೇರ್ಪಟ್ಟಿತು. ಸ್ನೇಹಿತರ ಹಾಗೆ ಕೈ ಕೈಹಿಡಿದುಕೊಂಡೇ ಸಾಗಿ, ಅರ್ಧರಾತ್ರಿಯ ಹೊತ್ತಿನಲ್ಲಿ ಸನ್ಯಾಸಿಯ ಕುಟೀರ ವನ್ನು ತಲಪಿದರು. ಎಲ್ಲಿಯೂ ಯಾವ ಸದ್ದೂ ಇರಲಿಲ್ಲ. ಕುಟೀರದೊಳಗೆ ಸನ್ಯಾಸಿ ಒಳ್ಳೆಯ ನಿದ್ದೆಯಲ್ಲಿದ್ದನು.

ಕಳ್ಳನು ತನ್ನ ಮನಸ್ಸಿನಲ್ಲಿ ಹೀಗೆ ಅಂದುಕೊಂಡನು:

"ಮೊದಲು ಈ ಭೂತವು ಸನ್ಯಾಸಿಯನ್ನು ಕೊಂದುಬಿಟ್ಟರೆ ಒಳ್ಳೆಯದಾದರೂ, ಸನ್ಯಾಸಿ ಎಚ್ಚೆತ್ತು ಕೂಗಿ ಗಲಾಟೆ ಮಾಡಿದರೆ ನಾಲ್ಕುಮಂದಿ ಓಡಿ ಬಂದಾರು. ಆಮೇಲೆ ನನಗೆ ಎಮ್ಮೆಯನ್ನು ಕದ್ದುಕೊಳ್ಳಲು ಸಾಧ್ಯವಾಗಲಾರದು. ಆದುದರಿಂದ ನಾನು ಮೊದಲು ನನ್ನ ಕೆಲಸ ಮುಗಿಸಿಕೊಳ್ಳುವುದು ಒಳ್ಳೆಯದು. ಆಮೇಲೆ ಭೂತ ಅದರ ಸಾವು ಏನಾದರೂ ಸತ್ತುಕೊಳ್ಳಲಿ, ನನಗೇನು?"



ಅದೇ ಸಮಯದಲ್ಲಿ ಭೂತವು ಕೂಡಾ ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸುತ್ತಿತ್ತು:

ಈ ಕಳ್ಳ ಮೊದಲು ಎಮ್ಮೆಯನ್ನು ಬಿಚ್ಚಿಕೊಳ್ಳಲು ಪ್ರಯತ್ನಿಸುವಾಗ, ಎಮ್ಮೆ ಕೂಗಬಹುದು: ಹಾಯ್ದು ಗಲಾಟೆ ಮಾಡಲೂ ಬಹುದು. ಆಗ ಸನ್ಯಾಸಿ ಎದ್ದು ಬಿಡುತ್ತಾನೆ. ನಮ್ಮನ್ನು ನೋಡಿ ಕೂಗುತ್ತಾನೆ. ನಾಲ್ಕುಮಂದಿ ಓಡಿಬಂದರೆ, ಅಥವಾ ಸನ್ಯಾಸಿ ಮಂತ್ರ ಪ್ರಯೋಗ ಮಾಡಿದರೆ ಅವನನ್ನು ಕೊಲ್ಲಲಿಕ್ಕೆ ಸಾಧ್ಯವಾಗಲಿಕ್ಕಿಲ್ಲ!

ಭೂತವು ಕಳ್ಳನನ್ನು ನೋಡಿ ಶಾಂತವಾಗಿ, "ಸ್ವಲ್ಪ ತಡೆ ತಮ್ಮಾ. ನಾನು ಒಳಗೆ ಹೋಗಿ ಸನ್ಯಾಸಿಯನ್ನು ಕೊಂದುಬಿಡುತ್ತೇನೆ. ಆಮೇಲೆ ನೀನು ನಿಶ್ಚಿಂತೆಯಿಂದ ಎಮ್ಮೆಯನ್ನು ಹೊಡೆದು ಕೊಂಡು ಹೋಗು. ನಿನ್ನನ್ನು ತಡೆಯುವವರೇ ಇರುವುದಿಲ್ಲ" ಎಂದಿತು.

ಅದಕ್ಕೆ ಕಳ್ಳ, "ಹಾಗಲ್ಲ ಅಣ್ಣಾ, ಮೊದಲು ನಾನು ಸದ್ದಿಲ್ಲದೆ ಎಮ್ಮೆಯನ್ನು ಬಿಚ್ಚಿ ಎಳೆದುಕೊಂಡು ಹೋಗಿ ಬಿಡುತ್ತೇನೆ. ಆ ಮೇಲೆನೀನು ಸನ್ಯಾಸಿಯನ್ನು ಇಷ್ಟಪ್ರಕಾರ ಕೊಂದು ಹಾಕು. ನನ್ನದೊಂದು ಸಣ್ಣ ಕೆಲಸ. ಅದು ಮೊದಲು ಆಗಗೊಡು" ಎಂದನು.

ಭೂತ ಒಪ್ಪಲಿಲ್ಲ. ಇಬ್ಬರಿಗೂ ವಾದ ಶುರುವಾಯಿತು, ಮೊದಲು ಮೆಲ್ದನಿಯಿಂದ ಮಾತಾಡಿಕೊಳ್ಳುತ್ತಿದ್ದವರ ಶಬ್ದ ಜೋರುಜೋರಾಗಿ ಹೊರಡ ತೊಡಗಿತು. ಕಡೆಗೆ ಒಬ್ಬರನ್ನೊಬ್ಬರು ದೂಡುತ್ತ "ನಾನೇ ಮೊದಲು, ನಾನೇ ಮೊದಲು" ಎಂದು ಕೂಗ ತೊಡಗಿದರು. ಅದು ದೊಡ್ಡ ಕೂಗಾಟವಾಗಿ ದೊಡ್ಡ ಬೊಬ್ಬೆಯಾಗಿ ಮಾರ್ಪಟ್ಟಿತು.

ಕಳ್ಳನು ದೊಡ್ಡದನಿಯಿಂದ, "ಏನಯ್ಯೋ ಸನ್ಯಾಸೇ ! ಇಕೋ ಭೂತಬಂದಿದೆ ನೋಡು ! ನಿನ್ನನ್ನೇ ಕೊಲ್ಲುತ್ತದಂತೆ !" ಎಂದು ಕೂಗಿದನು.

ಭೂತವು ಅದಕ್ಕಿಂತ ದೊಡ್ಡ ಶಬ್ದದಿಂದ, "ನೊಡಯ್ಯಾ ಸನ್ಯಾಸೀ ! ಈ ಕಳ್ಳ ನಿನ್ನ ಎಮ್ಮೇನ ಕದ್ದುಕೊಂಡು ಹೋಗ್ತಾನಂತೆ !" ಎಂದಿತು.

ಈ ದೊಡ್ಡ ಗಲಾಟೆಗೆ ಸನ್ಯಾಸಿಗೆ ಮಾತ್ರವಲ್ಲ, ತುಸು ದೂರದಲ್ಲಿರುವ ಮನೆಯಲ್ಲಿರುವವರಿಗೂ ಎಚ್ಚರವಾಯಿಶು. ಸನ್ಯಾಸಿಯ ಕುಟೀರದಲ್ಲಿ ಏನೋ ನೆಡೆಯುತ್ತಿದೆ ಎಂದುಕೊಂಡು ಕತ್ತಿ ದೊಣ್ಣೆಗಳನ್ನು ಹಿಡಿದುಕೊಂಡು ಅನೇಕರು ಓಡಿಬಂದರು. ಅವರಲ್ಲಿ ಕೆಲವರು ಓಡಲಿರುವ ಕಳ್ಳನನ್ನು ಹಿಡಿದರು. ಭೂತಮಾಂತ್ರಿಕನು ಬಂದು ಭೂತಕ್ಕೆ ದಿಗ್ಬಂಧನ ಮಾಡಿ ಬಂಧಿಸಿ ಮಾರಣಹೋಮ ಮಾಡಿದನು. ಆಮೇಲೆ ಕಳ್ಳನನ್ನು ವಿಚಾರಿಸಲು, ದುರ್ಜನರೊಳಗೆ ಸ್ನೇಹವು ನೀರ್ಗುಳ್ಳೆಯಂತಹುದೆಂದು ಎಲ್ಲರಿಗೂ ತಿಳಿಯಿತು.





# ನಿಜವಾದ ಸ್ನೇಹಿತ

ಒಂದು ಊರಿನಲ್ಲಿ ವೀರಣ್ಣನೆಂಬವನಿದ್ದನು. ತನ್ನನ್ನು ಕುರಿತು ಇಲ್ಲದ ಸಲ್ಲದ ಹೆಚ್ಚುಳಿಕೆ ಹೇಳಿಕೊಳ್ಳುವುದು ಅವನಿಗೊಂದು ಮೋಜು, ಅಭ್ಯಾಸ. ಅದು ಒಳ್ಳೆಯ ಅಭ್ಯಾಸವಲ್ಲವೆಂದು ತಂದೆ ಅವನಿಗೆ ಎಷ್ಟೊಸಾರಿ ಹೇಳಿ ನೋಡಿದ್ದನು, ಆದರೂ ವೀರಣ್ಣ ತನ್ನ ಅಭ್ಯಾಸ ಬಿಡಲಿಲ್ಲ. ಅವನು ಬೆಳೆದು ದೊಡ್ಡವನಾದ ಮೇಲೆ ಹೇಳಿ ಪ್ರಯೋಜನವಿಲ್ಲವೆಂದುಕೊಂಡು ತಂದೆ ಸುಮ್ಮನಾದನು.

ಶಾಕಾಹಾರಿಯಾಗಿರುವ ವೀರಣ್ಣನು ತಾನು ಕಟ್ಟಾ ಅಹಿಂಸಾವಾದಿ ಎಂದು ಜಂಬ ಹೊಡೆದುಕೊಳ್ಳುವನು. ಮಾಂಸಾಹಾರಿಗಳನ್ನು ನೋಡಿ ಎಗತಾಳಿ ಮಾಡುವನು, ಮಾಂಸಾಹಾರಿಗಳೆಲ್ಲರೂ ಪ್ರಾಣಿಹಿಂಸೆ ಮಾಡುವ ಪಾಪಿಗಳೆಂದೂ, ಕ್ರೂರರೆಂದೂ, ದುಷ್ಟರೆಂದೂ ಅವನ ಅಭಿಪ್ರಾಯ. ಆದರಿಂದ ಅನೇಕರಿಗೆ ಮನಸ್ಸಿನೊಳಗೆ ನೋವಾಗಿತ್ತು.

ಹೀಗಿರುವಾಗ ಒಂದುದಿನ ವೀರಣ್ಣನ ಮನೆಯೊಳಗೆ ಅಕಸ್ಮಾತ್ತಾಗಿ ನಾಗರಹಾವೊಂದು ಬಂದುಬಿಟ್ಟಿತು. ವೀರಣ್ಣನ ತಂದೆ ಅದನ್ನು ಕೊಂದುಬಿಟ್ಟನು. ಆ ಕೆಲಸಕ್ಕೆ ವೀರಣ್ಣ ಕೂಡಾ ತಂದೆಗೆ ಸಹಾಯ ಮಾಡಿದನು. ಈ ಸಮಾಚಾರ ವೀರಣ್ಣನ ಸ್ನೇಹಿತರಿಗೆ ಕೂಡಾ ತಿಳಿಯಿತು.

"ನಾಗರಹಾವನ್ನು ಕೊಂದಿರಲ್ಲಾ? ಅದು ಹಿಂಸೆಯಲ್ಲವೇ?" ಎಂದು ವೀರಣ್ಣನನ್ನು ಅವನ ಸ್ನೇಹಿತನೊಬ್ಬನು ಕೇಳಿದನು.

"ಅಲ್ಲವೇ ಅಲ್ಲ. ಅದು ಕಪ್ಪೆಗಳನ್ನೂ, ಇಲಿಗಳನ್ನೂ ಹಿಂಸಿಸುವಂಥಾದ್ದು. ಒಂದು ನಾಗರಹಾವು ಸತ್ತರೆ ಎಷ್ಟೋ ಇತರ ಜೀವಿಗಳು ರಕ್ಷಿಸಲ್ಪಡುತ್ತವೆ. ಅದಕ್ಕೇ ನಾನು ಕೂಡಾ ಹೋಗಿ ಅದನ್ನು ಕೊಲ್ಲಲು ಸಹಾಯ ಮಾಡಿದೆ. ಅಷ್ಟೇ ಹೊರತು ನನ್ನ ಪ್ರಾಣ ಕಾಪಾಡಿಕೊಳ್ಳಲಿಕ್ಕಾಗಿ ಅಲ್ಲವೇ ಅಲ್ಲ" ಎಂದನು ವೀರಣ್ಣ.

ಹಾಗಾದರೆ ನ್ಯಾಯಕ್ಕಾಗಿ ಹಿಂಸೆ ಮಾಡಿದರೆ ತಪ್ಪಲ್ಲವೆಂದಾಯಿತು. "ನಾನು ಕೂಡಾ ಅದಕ್ಕೇ ಮೇಕೆಗಳನ್ನುಕೊಂದು ತಿನ್ನುವುದು. ಅವುಗಳನ್ನು ಸ್ವೇಚ್ಛೆಯಾಗಿ ಬಿಟ್ಟುಬಿಟ್ಟರೆ ಹೊಲಗದ್ದೆಗಳಿಗೆ ಹೋಗಿ ಪೈರು ಪಚ್ಚೆಗಳನ್ನೆಲ್ಲ ಮೇದು ನಿನ್ನಂಥವರಿಗೆ ಹೊಟ್ಟೆಗೇನಿಲ್ಲದ ಹಾಗೆ ಮಾಡುತ್ತವೆ." ಎಂದನು ವೀರಣ್ಣನ ಸ್ನೇಹಿತ.

**ಜಿ. ರಾಮಲಕ್ಷ್ಮಿ.**



ವೀರಣ್ಣ ಅದಕ್ಕೇನೂ ಉತ್ತರಕೊಡದೆ ಆಗ ಸುಮ್ಮನಾದರೂ, ಜಂಬ ಹೇಳಿಕೊಳ್ಳುವುದನ್ನು ಮಾತ್ರ ಬಿಡಲಿಲ್ಲ.

ವೀರಣ್ಣನಿಗೆ ಮುಖ್ಯವಾದ ಪ್ರಾಣಸ್ನೇಹಿತರು ಇಬ್ಬರಿದ್ದರು. ಅವರು ಕೂಡಾ ವೀರಣ್ಣನೊಂದಿಗೆ. ಇಲ್ಲದ ಹೊಲ್ಲದ ಜಂಬ ಹೇಳಿಕೊಳ್ಳುವುದು ಒಳ್ಳೆಯದಲ್ಲವೆಂದು ಎಷ್ಟೋ ಸಾರಿ ಹೇಳಿ ನೋಡಿದರು. ಆದರೆ ವೀರಣ್ಣನು ಅವರಿಗೆ ತಾನು ಸತ್ಯದ ಹೊರತು ಸುಳ್ಳನ್ನು ಹೇಳುವವನಲ್ಲವೆಂದೂ, ಅದು ಜಂಬ ಮಾತೇನೂ ಅಲ್ಲವೆಂದೂ ಒತ್ತಿ ಉತ್ತರ ಕೊಟ್ಟನು.

ಈ ಮೂವರು ಸ್ನೇಹಿತರೂ ಒಂದು ದಿನ ಊರ ನಡುವಿನಲ್ಲಿದ್ದ ಅರಳೀ ಮರದ ಕೆಳಗೆ ಕುಳಿತುಕೊಂಡು ಲೋಕಾಭಿರಾಮವಾಗಿ ಮಾತಾಡಿಕೊಂಡಿದ್ದರು. ಆಗ ಅವರ ಬಳಿಗೆ ನಾಲ್ಕನೆಯವನೊಬ್ಬನು ಬಂದು, “ನಿಮ್ಮನ್ನು ನೋಡಿದರೆ ಒಳ್ಳೆಯವರಾಗಿ ಕಾಣುವಿರಿ. ನಾನು ಈ ಊರಿಗೆ ಹೊಸಬ, ನಿಮ್ಮೊಂದಿಗೆ ಸ್ನೇಹ ಮಾಡಿಕೊಳ್ಳಬೇಕೆಂದು ನನಗೆ ಕಾಣುತ್ತದೆ. ಅದಕ್ಕೆ ನಿಮ್ಮ ಒಪ್ಪಿಗೆಯೆ?” ಎಂದನು. ಆಮೇಲೆ ನಡೆದ ಮಾತುಗಳಲ್ಲಿ ಅವನು ನೆರೆಯ ಊರಿನವನೆಂದೂ, ಈ ಊರಿನಲ್ಲಿ ಒಂದು ಕೆಲಸಕ್ಕಾಗಿ ಬಂದಿರುವನೆಂದೂ ತಿಳಿಯಿತು. ರಾತ್ರಿ ಯಾರ ಮನೆಯಲ್ಲಾದರೂ ಇದ್ದು ಮರುದಿನ ಬೆಳಿಗ್ಗೆ ಹೊರಟು ಹೋಗುತ್ತಾನಂತೆ.

ವೀರಣ್ಣನ ಸ್ನೇಹಿತನೊಬ್ಬನು ನಿಟ್ಟುಸಿರುಬಿಟ್ಟು, “ನಾವು ಎಂಥ ಒಳ್ಳೆಯ ಮಿತ್ರರೋ ! ನಮ್ಮೊಳಗಿನ ಒಬ್ಬನ ಲೋಪವನ್ನು ತಿದ್ದಲು ಇನ್ನೊಬ್ಬನಿಗೆ ಆಗುವುದಿಲ್ಲ. ನಿಜವಾದ ಸ್ನೇಹಿತನೆಂದರೆ ಜತೆಯ ಸ್ನೇಹಿತನನ್ನು ಸಂಸ್ಕರಿಸಲು ಶಕ್ತನಾಗಿರಬೇಕು! ಅದು ನಮ್ಮಲ್ಲಿದೆಯೋ ಇಲ್ಲವೋ ನಮಗೇ ಗೊತ್ತಿಲ್ಲ. ನಾವೇನು ಹೇಳಬಲ್ಲೆವು? ” ಎಂದನು.

“ಹಾಗಾದರೆ ನನ್ನನ್ನು ನಿಜವಾದ ಸ್ನೇಹಿತನೆಂದು ತಿಳಿದುಕೊಳ್ಳಿ” ಎಂದನು ನಾಲ್ಕನೇಯವನು.

“ಹಾಗೇನು ? ಸರಿ, ನಾವು ಮೂವರಲ್ಲಿ ಯಾರ ಸ್ನೇಹ ನಿನಗೆ ಇಷ್ಟವೆನಿಸುತ್ತದೆ ?” ಎಂದು ವೀರಣ್ಣನು ಅವನನ್ನು ಕೇಳಿದನು.

ಮುಖ ನೋಡಿ ಮನುಷ್ಯನ ಗುಣ ತಿಳಿಯುವುದು ಕಷ್ಟವೇ, ನೀವು ಮೂವರಲ್ಲಿ ಯಾರು ನನಗೆ ಈ ದಿನ ರಾತ್ರಿ ಆಶ್ರಯಕೊಡುವಿರೋ ಅವರ ಸ್ನೇಹವೆಂದರೆ ನನಗೆ ಇಷ್ಟವಾಗಿರುತ್ತೆ ” ಎಂದನು ನಗುತ್ತಾ ನಾಲ್ಕನೆಯವನು.

ಕೂಡಲೇ ಮೂವರು ಮಿತ್ರರೂ ನಾನು ತಾನೆಂದು ಸ್ಪರ್ಧೆಗೆಬಿದ್ದರು. ಆಗ ನಾಲ್ಕನೆಯವನು ಅವರನ್ನು ಕುರಿತು, “ಹೀಗೆ ಮೂವರೂ ಹೇಳಿದರೆ ಪ್ರಯೋಜನವೇನಿದೆ? ನಾನೊಂದು ಪ್ರಶ್ನೆ ಕೇಳುತ್ತೇನೆ. ಯಾರು ನನಗೆ ಹಿಡಿಸುವಂಥ ಉತ್ತರ ಹೇಳುತ್ತಾರೋ ಅವರ ಮನೆಯಲ್ಲಿ ರಾತ್ರಿ ಮಲಗುತ್ತೇನೆ. ಹಾಗಂತ ನೀವು ಸುಳ್ಳು ಮಾತ್ರ

ಹೇಳಬಾರದು. ನಿಮ್ಮ ಮನಸ್ಸಿನಲ್ಲಿ ಏನಿದೆಯೋ ಅದನ್ನೇ ಹೇಳಬೇಕು" ಎಂದನು.

ಇದಕ್ಕೆ ಮೂವರು ಮಿತ್ರರೂ ಒಪ್ಪಿದರು.

"ಹಣವನ್ನು ಕುರಿತು ನಿಮ್ಮ ಅಭಿಪ್ರಾಯ ಹೇಳಿರಿ ನೋಡುವಾ" ಎಂದನು ನಾಲ್ಕನೇಯವನು.

"ಈ ಪ್ರಪಂಚವೆಲ್ಲಾ ಹಣದಿಂದಲೇ ನಡೆಯುತ್ತದೆ. ನನಗೆ ಹಣವೆಂದರೆ ಪ್ರಾಣ. ಲಕ್ಷಗಟ್ಲೆ ಸಂಪಾದಿಸ ಬೇಕೆಂದಿದ್ದೇನೆ. ಆದರೆ ನಾನೊಬ್ಬ ಬಡವ. ಎಲ್ಲಿ ಹಣ ಸಿಕ್ಕಿದರೂ ನನಗೆ ಬೇಕು. ಇದು ನಿಜ" ಎಂದನು ವೀರಣ್ಣನ ಒಬ್ಬ ಮಿತ್ರ.

ಆಮೇಲೆ ಎರಡನೇ ಮಿತ್ರನು, "ನಾನು ಕೂಡಾ ಬಡವನೇ, ಹಣ ಸಂಪಾದಿಸುವ ಮಾರ್ಗವೇ ನೆಂಬುದೂ ನನಗೆ ಗೊತ್ತು. ಆದರೆ ಎಷ್ಟು ಹಣ ಸಂಪಾದಿಸಿದರೂ ಮನುಷ್ಯನಿಗೆ ತೃಪ್ತಿಯಾಗದು. ಹಣಬೇಕೆಂಬ ತಪನ ದುಃಖಗಳಿಗೆ ಮೂಲವೆಂದು ಕೊಂಡು ನಾನು ಅಗತ್ಯಕ್ಕಿಂತ ಹೆಚ್ಚಿಗೆ ಸಂಪಾದಿಸು ವುದೇ ಇಲ್ಲ" ಎಂದನು.

ಈಗ ವೀರಣ್ಣನ ಸರದಿ ಬಂದಿತು. ಅವನು ಮುಖ ದಲ್ಲಿ ಹೆಮ್ಮೆಯ ಭಾವವನ್ನು ತಂದುಕೊಂಡು ಹೀಗೆಂದನು :

"ನಿಜ ಹೇಳುತ್ತೇನೆ. ನಾನು ನಾನು ಅನ್ನುವುದು ನಾನು ಅಲ್ಲ. ನನ್ನದು ನನ್ನದು ಅನ್ನುವುದು ನನ್ನದೂ ಅಲ್ಲ, ಯೋಗ ಕೂಡಿ ಬಂದು ಹಣ ಸೇರಿದರೆ ಮನುಷ್ಯನು ಅಹಂಕಾರದಿಂದ ಅದನ್ನು ತಾನೇ ಸಂಪಾದಿಸಿದೆನೆಂದುಕೊಳ್ಳುತ್ತಾನೆ, ನನಗೆ ಬೇಕಾದಷ್ಟು ಹಣವಿದೆ. ಆದರೆ ಹಣದ ಮೇಲೆ ನನಗೆ ಮಮಕಾರವೇನೂ ಇಲ್ಲ. ಅದು ನನ್ನದೆಂಬ ಭಾವನೆ ಕೂಡಾ ನನಗಿಲ್ಲ."

ಹೀಗೆ ಮೂವರೂ ಹೇಳಿದ ಮಾತುಗಳಲ್ಲಿ ನಾಲ್ಕನೆಯವನು ವೀರಣ್ಣನನ್ನೇ ತುಂಬಾ ಮೆಚ್ಚಿ ಕೊಂಡು "ಇವರಿಬ್ಬರಿಗಿಂತಲೂ ನಿಮ್ಮ ಅಭಿ



ಪ್ರಾಯವೇ ತುಂಬಾ ಉನ್ನತವಾಗಿದೆ. ನಾನು ನಿಮ್ಮ ಸ್ನೇಹವನ್ನೇ ಬಯಸುತ್ತೇನೆ" ಎಂದನು.

ಆ ಮಾತು ಕೇಳಿ ವೀರಣ್ಣನು ಸಂತೋಷ ಪರವಶವಾಗಿ, "ನಿನ್ನ ಅಭಿಪ್ರಾಯ ಹೇಳಲಿಲ್ಲ ವಲ್ಲ ? ಹಣವನ್ನು ಕುರಿತು ನಿನ್ನ ಅಭಿಪ್ರಾಯ ವೇನು ?" ಎಂದು ಕೇಳಿದನು.

ಅದಕ್ಕೆ ನಾಲ್ಕನೆಯವನು, "ಅದನ್ನು ನಾಳೆ ಖಂಡಿತವಾಗಿ ಹೇಳುತ್ತೇನೆ" ಎಂದನು.

ವೀರಣ್ಣನು ನಾಲ್ಕನೆಯವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಮನೆಯನ್ನೆಲ್ಲಾ ತೋರಿ ಸಿದನು. ಬಹಳ ಮರ್ಯಾದೆ ಮಾಡಿ ಉಪಚರಿ ಸಿದನು. ರಾತ್ರಿ ಅವನಿಗೆ ಒಳ್ಳೆಯ ಭೋಜನ ವಿಡಿಸಿ, ಸುಖನಿದ್ರೆಗೆ ಬೇಕಾದ ಹಾಗೆ ಮಾಡಿ ಕೊಟ್ಟನು. ವೀರಣ್ಣನೂ ನಾಲ್ಕನೆಯವನೂ ಒಂದೇ ಕೋಣೆಯಲ್ಲಿ ಮಲಗಿದರು. ವೀರಣ್ಣನು ಬೆಳಿಗ್ಗೆ ಎದ್ದು ನೋಡಿದಾಗ ನಾಲ್ಕನೆಯವನು ಹಾಸಿಗೆಯಲ್ಲಿ

ಕಾಣಲೇ ಇಲ್ಲ. ತನಗಿಂತ ಮೊದಲೇ ಎದ್ದು ಬಾವಿಯ ಹತ್ತಿರ ಪ್ರಾತಃಕೃತ್ಯಗಳನ್ನು ಮಾಡುವನೇನೋ ಎಂದುಕೊಂಡು ಅತ್ತ ಹೋಗಿ ನೋಡಿದನು. ಆಮೇಲೆ ಮನೆಯಲ್ಲಿದ್ದವರನ್ನೆಲ್ಲಾ ಕೇಳಿದನು. ಯಾರಿಗೂ ಅವನ ಸಂಗತಿ ಗೊತ್ತಿಲ್ಲವೆಂದರು. ಹಾಗಾದರೆ ನಾಲ್ಕನೆಯವನು ಅರ್ಧರಾತ್ರಿಯಲ್ಲೇ ಎದ್ದು ಯಾರಿಗೂ ಹೇಳದೆ ಹೊರಟು ಹೋಗಿದ್ದಾನೆಂದಾಯಿತು !

ಈ ಅನುಮಾನ ಬಂದ ಕೂಡಲೇ ವೀರಣ್ಣನ ಎದೆ ಡವಡವವೆಂದಿತು. ಅವನು ಕಳ್ಳನಾಗಿರಬೇಕೆಂದೇ ತೋರಿತು. ವೀರಣ್ಣನು ತನ್ನ ಕೋಣೆಗೆ ಓಡಿ ಬಂದು ತನ್ನ ಪೆಟ್ಟಿಗೆ ತೆರೆದು ನೋಡಿದನು. ಅದರಲ್ಲಿ ಇರಿಸಿದ್ದ ಸಾವಿರ ವರಹಗಳೂ ಚಿನ್ನದ ಕೆಲವು ಒಡವೆಗಳೂ ಕಾಣಲಿಲ್ಲ. ಏನೋ ಬರೆದಿದ್ದ ಒಂದು ಕಾಗದ ಪೆಟ್ಟಿಗೆಯಲ್ಲಿದ್ದಿತು. ಅದನ್ನು ತೆಗೆದು ಬೇಗಬೇಗನೇ ಓದಿದನು :

"ಮಿತ್ರಾ, ನನಗೆ ಹಣವೆಂದರೆ ಪ್ರಾಣವೇನಲ್ಲ. ಆದರೆ ಹಣದ ಅಗತ್ಯ ತುಂಬಾ ಇದೆ. ಹಣ ಸಂಪಾದಿಸುವ ಅನೇಕ ಮಾರ್ಗಗಳೂ ನನಗೆಗೊತ್ತು. ಆದರೆ ಯಾರನ್ನೂ ನೋಯಿಸಲು ನನಗಿಷ್ಟವಿಲ್ಲ. ಆದುದರಿಂದ ಸಾಧಾರಣವಾಗಿ ನಾನು ಕಳ್ಳತನ ಮಾಡುವದಿಲ್ಲ. ಹಣದಮೇಲೆ ಮಮಕಾರವೇ ನಿಲ್ಲದ ನಿನ್ನಂಥ ಧನಿಕಮಿತ್ರನೊಬ್ಬ ಸಿಕ್ಕಿದ್ದು ನನ್ನ ಅದೃಷ್ಟ !" ಎಂದು ಅದರಲ್ಲಿತ್ತು.

ನಾಲ್ಕನೆಯವನು ಆ ಕಾಗದವನ್ನು ಬರೆದು ಅಲ್ಲಿಟ್ಟಿರುವನೆಂದು ವೀರಣ್ಣನು ತಿಳಿದನು. ಹಣ ಹೋದ ಸಂಗತಿಯನ್ನು ಅವನು ಮನೆಯಲ್ಲಿ ಯಾರಿಗೂ ತಿಳಿಸಲಿಲ್ಲ. ಆದರೆ ತನ್ನ ಮಿತ್ರರಿಗೆ ಮಾತ್ರ ಆ ಕಾಗದವನ್ನು ತೋರಿಸಿ, ಕಣ್ಣೀರು ತುಂಬಿಕೊಂಡನು.

"ಅಲ್ಲೋ ವೀರಣ್ಣಾ, ನಿನಗೆ ನನ್ನದು ಎಂಬ ಮಮಕಾರ ಇಲ್ಲವೆಂದೆಯಲ್ಲಾ? ಹೋದ ಹಣವನ್ನು ಕುರಿತು ಚಿಂತೆಮಾಡಿ ಏನು ಪ್ರಯೋಜನ?" ಎಂದು ಮಿತ್ರರು ಸಮಾಧಾನ ಹೇಳಿದರು.

"ಏಕೆ ಇನ್ನೂ ನನ್ನನ್ನು ತಿವಿಯುವಿರಿ? ಈ ಜನ್ಮದಲ್ಲಿ ಇನ್ನು ಮೇಲೆ ಹೆಮ್ಮೆ ಕೊಚ್ಚಿಕೊಳ್ಳುವುದಿಲ್ಲ!" ಎಂದನು ವೀರಣ್ಣ.

"ಈಗ ಹೇಳಿದ ಮಾತನ್ನು ನೀನು ಗಟ್ಟಿಯಾಗಿ ಪಾಲಿಸುವುದಾದರೆ ಆ ನಾಲ್ಕನೆಯವನು ನಿಜಕ್ಕೂ ನಿನಗೆ ಒಳ್ಳೆಯ ಮಿತ್ರನೇ. ಅವನು ನಿನ್ನ ಕೊರತೆಯ ಕೊಳೆಯನ್ನು ತೊಳೆದು ಬಿಟ್ಟನಪ್ಪಾ!" ಎಂದರು ವೀರಣ್ಣನ ಮಿತ್ರರು. ಮಿತ್ರರ ಮಾತಿಗೆ ಸಂತೋಷಿಸಬೇಕೇ ದುಃಖಿಸಬೇಕೇ ಎಂದು ವೀರಣ್ಣನಿಗೆ ಗೊತ್ತಾಗಲಿಲ್ಲ.





# ಸಾಣೆ ಹಿಡಿದ ವಜ್ರ

**ಹಿಂದೆ** ಶರವಣಪುರವೆಂಬಲ್ಲಿ ಗೋಪಾಲನೆಂಬ ಒಬ್ಬ ಹುಡುಗನಿದ್ದನು. ತಂದೆ ಅವನ ಚಿಕ್ಕಂದಿನಲ್ಲೇ ತೀರಿಹೋಗಿದ್ದನು. ತಾಯಿಯೇ ಅವನನ್ನು ಪೋಷಿಸುತ್ತ ವಿದ್ಯಾಬುದ್ಧಿಗಳನ್ನು ಕಲಿಸಿ ಬೆಳೆಯಿಸಿದಳು.

ಒಂದು ದಿನ ತಾಯಿ ಗೋಪಾಲನೊಂದಿಗೆ, "ನೋಡಪ್ಪಾ, ನಿನ್ನ ಚಿಕ್ಕಪ್ಪ ರಾಜಧಾನೀ ನಗರದ ದಿವಾಣದಲ್ಲಿದ್ದಾರೆ. ನೀನು ಹೋಗಿ ಅವರನ್ನು ನೋಡು. ಅವರು ಮನಸ್ಸು ಮಾಡಿದರೆ ನಿನಗೊಂದು ಉದ್ಯೋಗ ಸಿಕ್ಕೀತು." ಎಂದಳು.

ಅದರಂತೆ ಗೋಪಾಲನು ರಾಜಧಾನಿಗೆ ಹೋಗಿ, ವಿರೂಪಾಕ್ಷನೆಂಬ ಚಿಕ್ಕಪ್ಪನನ್ನು ನೋಡಿದನು. ತಾನು ಬಂದ ಕೆಲಸವನ್ನು ಕುರಿತು ಆತನೊಂದಿಗೆ ಹೇಳಿದನು. ವಿರೂಪಾಕ್ಷನು ಗೊಪಾಲನೊಂದಿಗೆ, "ನೋಡೋಣ. ದಿವಾಣದಲ್ಲಿ ನನಗೆ ತಿಳಿದ ನಾಲ್ಕು ದೊಡ್ಡ ಮನುಷ್ಯರಿದ್ದಾರೆ. ನಿನ್ನನ್ನು ಅವರಿಗೆ ಪರಿಚಯ ಮಾಡಿಸುತ್ತೇನೆ." ಎಂದನು.

ವಿರೂಪಾಕ್ಷನು ಗೋಪಾಲನನ್ನು ಮೊದಲು ದಿವಾಣದ ಪ್ರಧಾನಾಧಿಕಾರಿಯಾದ ದುರ್ವಾಸನೆಂಬವನ ಬಳಿಗೆ ಕರೆದುಕೊಂಡು ಹೋದನು.

ವಿರೂಪಾಕ್ಷನು ಹೇಳಿದ ಸಮಾಚಾರವನ್ನು ದುರ್ವಾಸನು ಆಲಿಸಿ, ಗೋಪಾಲನನ್ನು, ತೀಕ್ಷ್ಣ ದೃಷ್ಟಿಯಿಂದ ನೋಡಿ, "ಈ ಆಟದ ಪೋರನಿಗೆ ಆಗಲೇ ಉದ್ಯೋಗದ ಗೊಡವೆ ಏತಕ್ಕೆ? ಇವನೇನು ಕೆಲಸ ಮಾಡಿಯಾನು?" ಎಂದನು.

ವಿರೂಪಾಕ್ಷನು ಅವನನ್ನು ಪ್ರಾರ್ಥಿಸುವಂತೆ, "ತಾವು ಹಾಗೆ ಹೇಳಬಾರದು. ಈ ಹುಡುಗನನ್ನು ಆದರಿಸುವವರು ನಿಮ್ಮ ಹೊರತು ಬೇರೆಯಾರೂ ಇಲ್ಲ. ನೀವು ದೊಡ್ಡ ಮನಸ್ಸು ಮಾಡಬೇಕು." ಎಂದು ಕೇಳಿಕೊಂಡನು.

ದುರ್ವಾಸನು ಕೋಪದಿಂದ ಹುಬ್ಬು ಸುರುಗಿಸಿ, "ಹೀಗೆಲ್ಲಾ ಹಲ್ಲು ಗಿಂಜಿ ಹೇಳಿಬಿಟ್ಟರಾಯಿತೇ? ಈ ಹುಡುಗ ಇನ್ನೊಮ್ಮೆ ಬಂದು ನನ್ನನ್ನು ನೋಡಲಿ!" ಎಂದನು.

ಇಬ್ಬರೂ ಆ ಕೋಣೆಯಿಂದ ಹೊರಗೆಬಂದರು. ಹೊರಗೆ ಬಂದ ಕೂಡಲೇ ಗೋಪಾಲನು, "ಚಿಕ್ಕಪ್ಪಾ. ಇಂಥಾ ಕೋಪಿಷ್ಠರು ಕೆಲಸವೇನು ಕೊಟ್ಟಾರು? ನೀವು ಸುಮ್ಮನೆ ಮಾತಾಡಿ ಬೈಗಳುತಿಂದಿರಿ!" ಎಂದನು. ವಿರೂಪಾಕ್ಷನು ನಕ್ಕು, "ಅವರ ಗುಣ ಹಾಗೇನೇ.

**ಬಿ. ಎ. ರಾವ್**



ಮಾತು ಕಠಿಣವಾಗಿದೆಯೇ ಹೊರತು ಮನಸ್ಸು ಬೆಣ್ಣೆಯಂಥಾದ್ದು. ಅವಸರವೇನಿಲ್ಲ. ಮತ್ತೆ ನಾಲ್ಕು ದಿನಗಳ ಮೇಲೆ ಅವರ ಬಳಿಗೆ ಹೋಗಬಹುದು." ಎಂದನು.

ಇನ್ನೊಂದುಸಾರಿ ನಿಜಕ್ಕೂ ದುರ್ವಾಸನಂಥವನ ಬಳಿಗೆ ಹೋಗಲೇ ಬಾರದೆಂದು ಗೋಪಾಲನು ಮನಸ್ಸಿನಲ್ಲಿ ಅಂದುಕೊಂಡನು.

ವಿರೂಪಾಕ್ಷನು ಸುಮ್ಮನಿರದೆ, ಗೋಪಾಲನನ್ನು ಮತ್ತೆ ಮೂವರು ದೊಡ್ಡ ಮನುಷ್ಯರ ಹತ್ತಿರ ಕರೆದುಕೊಂಡು ಹೋಗಿ ಪರಿಚಯ ಮಾಡಿಸಿದನು. ಮೂವರೂ ವಿರೂಪಾಕ್ಷನಿಗೆ ತುಂಬಾ ಮರ್ಯಾದೆ ಮಾಡಿದರು. ಗೋಪಾಲನನ್ನೂ ಆದರಿಸಿದರು.

ಮೊದಲನೇ ದೊಡ್ಡ ಮನುಷ್ಯ, "ಇದಕ್ಕಾಗಿ ನೀವೇ ಸ್ವತಃ ಬರಬೇಕಿತ್ತೇ ವಿರೂಪಾಕ್ಷರೇ ? ಕಾಗೆಯ ಹತ್ತಿರ ಸುದ್ದಿ ಕಳಿಸಿದ್ದರೆ ನಾನೇ ನಿಮ್ಮ ಕೆಲಸ ಮಾಡಿಸಿಕೊಡುತ್ತಿದ್ದೆ. ನಾಳೆ ಒಂದುಸಾರಿ ಹುಡುಗನನ್ನು ಕಳುಹಿಸಿಕೊಡಿ. ನೀವು ಬರಬೇಕಾದ ಅಗತ್ಯವಿಲ್ಲ." ಎಂದನು.

ವಿರೂಪಾಕ್ಷನು ಹಾಗೆಯೇ ಆಗಲೆಂದು ಅಲ್ಲಿಂದ ಹೊರಡುವಾಗ, ಅವನನ್ನು ಬದಿಗೆ ಕರೆದು, "ನಮ್ಮ ಸೋದರಳಿಯನ ಹೊಲದ ವಿಷಯ ಏನೋ ತಕರಾರಿನಲ್ಲಿದೆಯೆಂದು ನಿಮಗೊಮ್ಮೆ ಹೇಳಿದ್ದೇನಷ್ಟೆ? ಸ್ವಲ್ಪ ದಿವಾನರಿಗೆ ಹೇಳಿ ಅದು ಸಾನುಕೂಲವಾಗುವ ಹಾಗೆ ನೋಡಬೇಕಲ್ಲ ?" ಎಂದನು.

"ಸರಿ, ನೋಡುತ್ತೇನೆ" ಎಂದು ಅವನಿಗೆ ಹೇಳಿ, ವಿರೂಪಾಕ್ಷನು ಗೋಪಾಲನೊಂದಿಗೆ ಎರಡನೇ ದೊಡ್ಡ ಮನುಷ್ಯನ ಬಳಿಗೆ ಹೋದನು. ಅವನು ಕೂಡಾ ಗೋಪಾಲನಿಗೆ ಉದ್ಯೋಗ ಕೊಡಿಸುವ ಪ್ರಯತ್ನ ಮಾಡುವೆನೆಂದು ಅತ್ಯಾದರದಿಂದ ಹೇಳಿ, ವಿರೂಪಾಕ್ಷನು ಅಲ್ಲಿಂದ ಹೊರಡುವ ಹೊತ್ತಿಗೆ ಗುಟ್ಟಾಗಿ "ನನ್ನ ಅಳಿಯ ನಿಮ್ಮನ್ನೊಮ್ಮೆ ನೋಡಬೇಕು ಅಂತ ಇದ್ದಾನೆ. ನಿಮ್ಮಿಂದ ಅವನಿಗೇನೋ ಸಹಾಯವಾಗಬೇಕಂತೆ. ಯಾವಾಗ ಕಳಿಸಲಿ?" ಎಂದನು.

ವಿರೂಪಾಕ್ಷನು ಅವನಿಗೇನೋ ಸಮಾಧಾನ ಹೇಳಿ, ಮೂರನೇ ದೊಡ್ಡ ಮನುಷ್ಯನ ಬಳಿಗೆ ಗೋಪಾಲನನ್ನು ಕರೆದುಕೊಂಡು ಹೋದನು.

ಅವನು ಕೂಡಾ ಗೋಪಾಲನಿಗೆ ಉದ್ಯೋಗ ಮಾಡಿಸಿಕೊಡುವ ಭರವಸೆ ಕೊಟ್ಟು, "ನೋಡಿದರೆ ಹುಡುಗ ಚುರುಕಾಗಿರುವಂತೆ ಕಾಣುತ್ತಾನೆ. ಅವನಿಗೆ ತಕ್ಕ ಉದ್ಯೋಗ ನೋಡುವ ಭಾರ ನನಗಿರಲಿ. ಈಗ ನೋಡಿ, ನನ್ನ ಎರಡನೇ ಮಗಳನ್ನು ನಿಮ್ಮ ಹುಡುಗನಿಗೆ ಸ್ವಲ್ಪ ನೋಡುವಿರಾ ?" ಎಂದು ರಹಸ್ಯವಾಗಿ ಕೇಳಿದನು.

"ನನ್ನ ಮಗನ ವಿಷಯ ಆಮೇಲೆ ಮಾತಾಡೋಣ. ಮೊದಲು ಈ ಹುಡುಗನ ವಿಷಯ ಮುಗಿಯಲಿ." ಎಂದನು ಶಾಂತನಾಗಿ ವಿರೂಪಾಕ್ಷ.

ಅಲ್ಲಿಂದ ಮನೆಗೆ ಹೋಗುವ ದಾರಿಯಲ್ಲಿ ವಿರೂಪಾಕ್ಷನು ಗೋಪಾಲನೊಂದಿಗೆ, "ನೀನು ಈ ನಾಲ್ವರ ಬಳಿಗೆ ದಿನಾ ಒಮ್ಮೆ ಹೋಗುತ್ತಾ ಇರು. ಯಾರೋ ಒಬ್ಬರಿಂದ ನಿನಗೆ ಒಂದು ಉದ್ಯೋಗ ಸಿಗದಿರದು" ಎಂದನು.

ಅದರಂತೆ ಮರುದಿನದಿಂದ ಗೋಪಾಲನು ದಿವಾಣದ ಬೇರೆಬೇರೆ ಶಾಖೆಗಳಲ್ಲಿರುವ, ಮೂದರು ದೊಡ್ಡ ಮನುಷ್ಯರ ಬಳಿಗೂ ಹೋಗಿ ಬರುತ್ತಿದ್ದನೇ ಹೊರತು ದುರ್ವಾಸನ ಬಳಿಗೆ ಮಾತ್ರ ಹೋಗಲೇ ಇಲ್ಲ.

ನಾಲ್ಕು ದಿನಗಳ ಮೇಲೆ ವಿರೂಪಾಕ್ಷನು ಗೋಪಾಲನನ್ನು ನೋಡಿ, "ನಿನ್ನ ಉದ್ಯೋಗದ ಪ್ರಯತ್ನ ಎಲ್ಲೀವರೆಗೆ ಬಂದಿದೆಯಪ್ಪಾ ?" ಎಂದು ವಿಚಾರಿಸಿದನು.

"ಎಲ್ಲರೂ ನನಗೆ ಒಳ್ಳೇ ಮರ್ಯಾದೆ ಮಾಡುತ್ತಾರೆ. ನಾಳೆ ಬಾ, ನಾಡಿದು ಬಾ, ವಿಚಾರಿಸಿ ಹೇಳುತ್ತೇನೆ. ನೋಡುತ್ತೇನೆ, ಅನ್ನುತ್ತಾ ಇದ್ದಾರೆ." ಎಂದನು ಗೋಪಾಲ.

ವಿರೂಪಾಕ್ಷನು ಗೋಪಾಲನನ್ನು ಅನುಮಾನದಿಂದ ನೋಡುತ್ತ, "ನೀನು ದುರ್ವಾಸರ ಕಚೇರಿಗೆ ಹೋದ ಹಾಗಿಲ್ಲ ಅಲ್ಲವೆ ?" ಎಂದು ಕೇಳಿದನು.

"ಅಲ್ಲಿಗೇಕೆ ಚಿಕ್ಕಪ್ಪಾ ? ಅವರು ಮೊದಲನೇ ಸಾರಿ ನೋಡಿದಾಗಲೇ ನನ್ನನ್ನೊಂದು ಹುಳುವಿನ ಹಾಗೆ ನೋಡಿದರು. ಅವರ ಹತ್ತಿರ ಹೋಗಲಿಲ್ಲ" ಎಂದನು ಗೋಪಾಲ.

"ಅದೇ ತಪ್ಪು, ಅವರನ್ನು ಕೂಡಾ ತಪ್ಪದೆ ನೋಡು." ಎಂದನು ವಿರೂಪಾಕ್ಷ.

ಮರುದಿನ ಗೋಪಾಲನು ದುರ್ವಾಸನನ್ನು ಹೋಗಿ ನೋಡಿದನು. ಅವನನ್ನು ನೋಡಿ ದುರ್ವಾಸನು, "ನೀನೋ ? ಮೊನ್ನೆ ಬಂದವನಲ್ಲವೇ ? ನೀನು ಏನು ಕೆಲಸ ಮಾಡುವಿ? " ಎಂದು ಗೋಪಾಲನನ್ನು ಶಾಂತವಾಗಿ ಕೇಳಿದನು.

ಗೋಪಾಲನು ಸಂತೋಷದಿಂದ, ತಾನು ಮಾಡಬಲ್ಲ ಕೆಲಸಗಳನ್ನು ಕುರಿತು ಹೇಳಿದನು. ಅವರು ಕೇಳಿದ ಮನೆಗೆಲಸಗಳ ವಿಷಯಗಳಿಗೂ ಉತ್ಸಾಹ



ದಿಂದ ಉತ್ತರ ಕೊಟ್ಟನು. "ಹಾಗಾದರೆ ನೋಡೋಣ. ಈಗ ಹೋಗಿ ನಮ್ಮ ಮನೆಯಲ್ಲಿರುವ ತೋಟದ ಗಿಡಗಳಿಗೆ ನೀರು ಹೊಯ್ದು ನಾಳೆ ಬಾ, ನೋಡುತ್ತೇನೆ" ಎಂದನು ದುರ್ವಾಸ.

ತನಗೆ ಅಂತಹ ಕೆಲಸ ಹೇಳುತ್ತಾರೆಂದು ಗೋಪಾಲನು ಊಹಿಸಿರಲಿಲ್ಲ. ಆದರೆ ಮರು ಮಾತಾಡದೆ ಸೇವಕನೊಂದಿಗೆ ದುರ್ವಾಸನ ಮನೆಗೆ ಹೋಗಿ, ಆ ಕೆಲಸ ಮಾಡಿ ಹೋದನು. ಆ ಮೇಲೆ ಉಳಿದ ಮೂವರು ದೊಡ್ಡ ಮನುಷ್ಯರ ಬಳಿಗೂ ಹೋಗಿ, ಅವರಿಂದ ಮರ್ಯಾದೆಗೊಂಡು, "ನಾಳೆ ಬಾ ನೋಡೋಣ" ವೆನ್ನಿಸಿಕೊಂಡು ಹಿಂದಿರುಗಿದನು. ಅವರಾರೂ ಅವನೊಡನೆ ಯಾವುದೊಂದು ಸಣ್ಣ ಕೆಲಸವನ್ನೂ ಹೇಳಲಿಲ್ಲ.

ಗೋಪಾಲನು ಮರುದಿನ ಮತ್ತೆ ದುರ್ವಾಸನ ಬಳಿಗೆ ಹೋದನು. ಅವನನ್ನು ನೋಡಿದ ಕೂಡಲೇ ದುರ್ವಾಸನು, "ಈ ದಿನ ನಮ್ಮ ಕೆಲಸದಾಳು ಬರ ಲಿಲ್ಲವಂತೆ. ನನ್ನ ಮನೆಗೆ ಹೋಗಿ ಹಟ್ಟಿಯನ್ನಿಷ್ಟು ಶುಭ್ರ ಮಾಡಿ, ಮತ್ತೇನಾದರೂ ನಮ್ಮಾಕೆ ಹೇಳಿದ ಕೆಲಸ ಮಾಡು" ಎಂದನು.

ಗೋಪಾಲನು ಅಲ್ಲಿಗೆ ಹೋಗಿ ಹಾಗೆಯೇ ಮಾಡಿದನು. ಹೀಗೆ ದುರ್ವಾಸನು ದಿನಾ ಗೋಪಾಲನಿಗೆ ಏನೋ ಒಂದು ಕೆಲಸ ಹೇಳುತ್ತಲೇ ಇದ್ದನು. ಆತನ ಮನೆಯಲ್ಲಿಯೇ ಊಟ ತಿಂಡಿಯೂ ಆಯಿತು. ಉದ್ಯೋಗ ಕುರಿತು ಮಾತೇ ಎತ್ತಲಿಲ್ಲ.

ಒಂದು ದಿನ ದುರ್ವಾಸನು ವಿರೂಪಾಕ್ಷನನ್ನು ತನ್ನ ಬಳಿಗೆ ಕರೆಯಿಸಿದನು. ಆಗ ಗೋಪಾಲ ಕೂಡಾ ಪಕ್ಕದಲ್ಲೇ ಇದ್ದನು. ದುರ್ವಾಸನು ವಿರೂಪಾಕ್ಷನೊಂದಿಗೆ, "ನಿನ್ನ ಅಣ್ಣನ ಮಗನಿಗೆ ಅಸಾಧ್ಯವೆನಿಸುವ ಕೆಲಸವೇ ಇಲ್ಲದ ಹಾಗಿದೆ. ನಿನ್ನ ಹುಡುಗ ಸಾಣೆ ಹಿಡಿದ ವಜ್ರದಂಥವನೇ. ಅವನಿಗೆ ದಿವಾಣದಲ್ಲಿ ಕೆಲಸ ಮಾಡುವ ಸೇವಕರೆಲ್ಲರಮೇಲೂ ಅಧಿಕಾರಿಯಾಗಿರುವ ಉದ್ಯೋಗ ಕೊಡಿಸುತ್ತೇನೆ. ನಾಳೆಯಿಂದ ಇವನು ಇಲ್ಲಿ ಸೇವಕಪರ್ಯವೇಕ್ಷನಾಗಿರುತ್ತಾನೆ." ಎಂದನು.

ವಿರೂಪಾಕ್ಷನು ಮನೆಗೆ ಹಿಂದಿರುಗುವಾಗ ಗೋಪಾಲನೊಂದಿಗೆ, "ನೋಡಿದಿಯಾ, ದುರ್ವಾಸರು ಒಳ್ಳೆಯ ಮನಸ್ಸಿನವರೆಂದು ಮೊದಲೇ ಹೇಳಿದೆನಷ್ಟೆ? ಅವರು ನಿನ್ನನ್ನು ಬೇರೆ ಬೇರೆ ಪರೀಕ್ಷೆಗೆ ಗುರಿಪಡಿಸಿ ನಿನ್ನ ಸಾಮರ್ಥ್ಯಕ್ಕೆ ತಕ್ಕ ಕೆಲಸ ಕೊಟ್ಟರು, ಉಳಿದ ಮೂವರೂ ನನ್ನಿಂದ ಅವರಿಗಾಗ ಬೇಕಾದ ಕಾರ್ಯಗಳಲ್ಲೇ ಗುರಿಯಾಗಿದ್ದರಲ್ಲದೆ, ನಿನ್ನ ಸಂಗತಿ ಹಚ್ಚಿಕೊಳ್ಳಲಿಲ್ಲ." ಎಂದನು,

ಆ ಮೇಲೆ ಗೋಪಾಲನು ದಿವಾಣದ ಉದ್ಯೋಗ ಪ್ರವೇಶದಿಂದ ಒಳ್ಳೆಯ ಪರಿಸ್ಥಿತಿಗೆ ಕಾಲಿಟ್ಟನು.






ತನ್ನ ಮುದ್ದಿನ ಮಗ ವಿಘ್ನೇಶ್ವರನ ಗಣಾಧಿಪತ್ಯದ ಪಟ್ಟಾಭಿಷೇಕ ಮಹೋತ್ಸವಕ್ಕೆ, ಗಣೇಶನನ್ನು ಸಿಂಗರಿಸಲು ಪಾರ್ವತಿ ಜಗಜಗಿಸುವ ಬಣ್ಣದ ವಸ್ತ್ರಗಳನ್ನು ಆರಿಸಿಕೊಂಡಳು. ಆದರೆ ವಿಘ್ನೇಶ್ವರನು ಅವುಗಳನ್ನೆಲ್ಲ ಬಿಟ್ಟು ಬೆಳ್ಳಗಿನ ವಸ್ತ್ರಗಳನ್ನು ಧರಿಸಿಕೊಂಡನು.

"ಇದೇನಪ್ಪಾ, ಒಳ್ಳೊಳ್ಳೆಯ ವಸ್ತ್ರಭೂಷಣಗಳಿಂದ ಮೆರೆಯಬೇಕಾದ ನೀನು, ಹೀಗೆ ಶುಕ್ಲಾಂಬರಧರನೆನಿಸಿಕೊಳ್ಳುವುದೇನು ಚಂದವೋ ?" ಎಂದು ಕೇಳಿದಳು ಪಾರ್ವತಿ.

"ಒಳ್ಳೇ ಬಟ್ಟೆಗಳನ್ನು ಧರಿಸಬೇಕೆಂದು ತಾನೇ ಹೇಳುವಿ ? ನಾನು ಉಟ್ಟದ್ದು ಅಂಥವುಗಳೇ. ಬಿಳೀ ಬಣ್ಣವು ಒಳ್ಳೆಯತನವನ್ನೂ, ವಿವೇಕವನ್ನೂ ತಿಳಿಸುತ್ತದೆ ಅಮ್ಮಾ !" ಎಂದನು ವಿಘ್ನೇಶ್ವರ.

ವಿಘ್ನೇಶ್ವರನ ಗಣಾಧಿಪತ್ಯ ಪಟ್ಟಾಭಿಷೇಕವು ಮಹಾವೈಭವದಿಂದ ನಡೆಯಿತು. ವಿಘ್ನೇಶ್ವರನು ಸರ್ವ ಗಣಗಳಿಗೂ ನಾಥನಾದನು, ಆಗ ಜಯಲಕ್ಷ್ಮಿ ಎಂಬ ನಾಮಾಂಕಿತಳಾದ ಸಿದ್ಧಿಯೂ, ವಿದ್ಯಾವತಿ ಎಂಬ ಹೆಸರಿನವಳಾದ ಬುದ್ಧಿಯೂ ವಿಘ್ನೇಶ್ವರನನ್ನು ವರಿಸಿ ಅವನ ಇಕ್ಕೆಲಗಳನ್ನು ಅಲಂಕರಿಸಿದರು. ಆದರಿಂದ ವಿಘ್ನೇಶ್ವರನಿಗೆ ಸಿದ್ಧಿಬುದ್ಧಿ ವಿನಾಯಕನೆಂದು ಹೆಸರಾಯಿತು. ಅದೇ ಸಮಯದಲ್ಲಿ ಎಂಟು ದಿಕ್ಕುಗಳಿಂದ ಅಷ್ಟಸಿದ್ಧಿಯರು ಎಂಟುಮಂದಿ ಸುಂದರ ಕನ್ಯೆಯರಾಗಿ ಬಂದು ಬಕುಲಮಾಲಿಕೆಯನ್ನು ಹಾಕಿ ವಿನಾಯಕನನ್ನು ವರಿಸಿದರು. ಆದರಿಂದ ವಿಘ್ನೇಶ್ವರನು ಸಿದ್ಧಿವಿನಾಯಕನಾದನು. ಹೀಗೆ ವಿಘ್ನೇಶ್ವರನ ಕಲ್ಯಾಣ ಮಹೋತ್ಸವವು ಅತಿ ವೈಭವದಿಂದ ನಡೆಯಿತು.

ಎಲ್ಲಾ ಆದ ಮೇಲೆ ವಿಷ್ಣು ವಿಘ್ನೇಶ್ವರನನ್ನು ನೋಡಿ, "ಕೋಟಿ ವಿಘ್ನಗಳು ಬಂದರೂ ವಿನಾಯಕನ ಮದುವೆ ನಿಲ್ಲದು ಎಂಬ ಹೊಸದೊಂದು ಸಾಮತಿ ಪ್ರಪಂಚಕ್ಕೆ ಸಿಕ್ಕಿತು. ಅಪ್ಪಾ ಕಲ್ಯಾಣ ಗಣೇಶಾ, ಇನ್ನು ಮೇಲೆ ಎಲ್ಲಾ ಕಲ್ಯಾಣಗಳೂ ನಿನ್ನ ಕೈಯಿಂದಲೇ ನಡೆಯಬೇಕು. ಹಾಗೆ ನಡೆದ ಕಲ್ಯಾಣ ಫಲವಾಗಿ

## ೯. ಸ್ವಾಮಿಯ ಅವತರಣ



ಅವತರಿಸಿದ ಜನ್ಮವೇ ಸಾರ್ಥಕ ಜನ್ಮ!" ಎಂದು ವಿಘ್ನೇಶ್ವರನ ಸೊಂಡಿಲನ್ನು ತಡವಿ ಬೆನ್ನು ತಟ್ಟಿದನು.

ವಿಘ್ನೇಶ್ವರನು ಮುಗುಳು ನಗುತ್ತ "ಹಾಗೆಯೇ ಆಗುತ್ತದಯ್ಯಾ. ನೀನು ಕೌಸಲ್ಯೆಗೆ ರಾಮನಾಗಿ ಅವತರಿಸಿ ರಾವಣನ ದಶೆಯನ್ನು ಅಂತ್ಯಗೊಳಿಸುವಿಯಂತೆ" ಎಂದನು.

ಪುನಃ ವಿಷ್ಣು "ಎಲೋ ಗಜಾನನಾ, ನಿನ್ನ ಪ್ರಸನ್ನ ವದನವನ್ನು ನೋಡುವಾಗ, ಆನೆಯ ಮೇಲೆ ನನಗೆ ತುಂಬಾ ಪ್ರೀತಿ ಉಕ್ಕುತ್ತದೆ" ಎಂದನು.

"ಉಕ್ಕಲಿ ಬಿಡೂ! ಮೊಸಳೆಯ ಬಾಯಿಯಿಂದ ಗಜೇಂದ್ರನನ್ನು ರಕ್ಷಿಸಿ ಕರಿವರದನೆಂಬ ಹೆಸರು ಹೊತ್ತುಕೋ" ಎಂದನು ವಿಘ್ನೇಶ್ವರ.

ಎಂಟು ಮಂದಿ ಸಿದ್ಧಿ ಕನ್ಯೆಯರು ಹಿತವಾಗಿ ಚಾಮರ ಬೀಸುತ್ತಿರಲು ಸಿಂಹಾಸನದ ಮೇಲೆ ಸಿದ್ಧಿ ಬುದ್ಧಿಯರೊಂದಿಗೆ ನಕ್ಷತ್ರಗಳ ನಡುವಿನ ಚಂದ್ರನಂತೆ ವಿಘ್ನೇಶ್ವರನು ಪ್ರಕಾಶಿಸಿಕೊಂಡಿದ್ದ ಆ ಸಮಯದಲ್ಲಿ ಲಕ್ಷ್ಮಿ ಮುಖ ತಿರುಗಿಸಿಕೊಂಡು ಹೊರಟು ಹೋಗಲು ನೋಡಿದಳು. ವಿಷ್ಣು ಅವಳನ್ನು ತಡೆದು ವಿಘ್ನೇಶ್ವರನೊಂದಿಗೆ. "ವಿಘ್ನೇಶ್ವರಾ, ಲಕ್ಷ್ಮಿ ಸ್ಥಿರವಾಗಿರುವವಳಲ್ಲವೆಂದು ಲೋಕದವರಿಗೆಲ್ಲಾ ಗೊತ್ತಾಗಿದೆ. ಅವಳನ್ನು ಸ್ವಲ್ಪ ನಿನ್ನ ಮಡಿಲಲ್ಲಿ ಕೂಡಿಸಿಕೊಂಡು ಬಿಡು. ಆದರಿಂದ ಲಕ್ಷ್ಮಿಗೆ ಸ್ಥಿರತ್ವವು ಬಂದೀತೆಂದು ಕಾಣುತ್ತದೆ" ಎಂದನು.

ವಿಘ್ನೇಶ್ವರನು ಅತ್ಯಾನಂದದಿಂದ, "ಆಹಾ! ಮಹಾ ತಾಯಿ ಲಕ್ಷ್ಮಿಯನ್ನು ಮಡಿಲಲ್ಲಿ ಕೂಡಿಸಿಕೊಳ್ಳುವ ನನ್ನದು ಎಂಥ ದೊಡ್ಡ ಅದೃಷ್ಟ!" ಎಂದು ಲಕ್ಷ್ಮಿಯ ಪಾದಗಳನ್ನು ಸೊಂಡಿಲಿನಿಂದ ಸುತ್ತಿ ಎತ್ತಿ ತನ್ನ ಬಲ ತೊಡೆಯ ಮೇಲೆ ಇರಿಸಿದನು.

ಆಗ ವಿಷ್ಣು, "ಈಗ ವಿಘ್ನೇಶ್ವರನು ಲಕ್ಷ್ಮೀ ಗಣಪತಿಯಾದ. ತಾಯಿ ಮಗನನ್ನು ಯಾವ ವಿಧವಾಗಿ ನೋಡಿಕೊಳ್ಳುತ್ತಾಳೋ, ಅದೇ ವಿಧವಾಗಿ ವಿಘ್ನೇಶ್ವರನ ಅನುಗ್ರಹವಿದ್ದವರ ಬಳಿಯಲ್ಲಿ ಲಕ್ಷ್ಮಿ ಸ್ಥಿರವಾಗಿರುತ್ತಾಳೆ" ಎಂದು ಹೇಳಿದನು.

ಇದನ್ನೆಲ್ಲಾ ನೋಡಿಕೊಂಡೇ ಇದ್ದ ನಾರದನು ಮುಂದೆ ಬಂದು, "ಓಹೋಹೋ! ವಿಘ್ನೇಶ್ವರನಿಗೆ ಎಷ್ಟು ಹೆಸರುಗಳು! ಸಿದ್ಧಿ ವಿನಾಯಕ, ಲಕ್ಷ್ಮೀ ಗಣಪತಿ, ಶುಕ್ಲಾಂಬರಧರ, ಮೂಷಿಕವಾಹನ, ಇನ್ನೂ ಎಷ್ಟೆಷ್ಟೋ!" ಎಂದು ಹೇಳುತ್ತ, ಮಹತೀ ವೀಣೆಯನ್ನು ಝೇಂಕರಿಸಿ, ವಿಘ್ನೇಶ್ವರನ ಶತಕೋಟಿ ಸಹಸ್ರನಾಮಗಳನ್ನು ಹಾಡ ತೊಡಗಿ, "ಜಯ ಜಯ ಜಯ ಗಣನಾಯಕ ಜಯಹೇ" ಎಂದು ಗಾನ ಮಾಡುತ್ತ ಲೋಕಗಳಲ್ಲಿ ತಿರುಗಾಡ ತೊಡಗಿದನು.

ಒಂದುದಿನ ವಿಘ್ನೇಶ್ವರನು ಇಲಿಯ ವಾಹನದ ಮೇಲೇರಿಕೊಂಡು ಆಕಾಶಮಾರ್ಗದಲ್ಲಿ ತಿರುಗುತ್ತಾ, ವಿಂಧ್ಯಪರ್ವತ ಶ್ರೇಣಿಯನ್ನು ದಾಟಿ, ಇನ್ನೂ ದಕ್ಷಿಣಕ್ಕೆ ಹೋಗಿ ದೊಡ್ಡದೊಂದು ಕಗ್ಗಿನ ಬೆಟ್ಟವನ್ನು ನೋಡಿ ಅಲ್ಲಿ ಕೆಳಗಿಳಿದನು. ಆ ಪ್ರದೇಶ

ವೆಲ್ಲಾ ಬಾಳೇ ವನಗಳೇ ವನಗಳು. ದೊಡ್ಡದೊಡ್ಡ ಬಾಳೇ ಮರಗಳಿಂದ ಬಾಳೆಯಕಾಡಿನಂತೆ ಕಾಣು ತ್ತಿದ್ದಿತು. ಬೆಟ್ಟದ ಕೆಳಭಾಗದಲ್ಲಿ ಶಬರರು ಢಕ್ಕೆ ಡೋಲು ಡಮರಗಳನ್ನು ಕೋಲಾಹಲವಾಗಿ ಬಾರಿಸುತ್ತ, ಬಹಳ ಸಂಭ್ರಮದಿಂದ ಏನೋ ಉತ್ಸವ ನಡೆಸುತ್ತಿದ್ದರು.

ವಿಘ್ನೇಶ್ವರನು ಸ್ವಲ್ಪನಿಂತು ಆ ಉತ್ಸವದ ಚಂದವನ್ನು ನೋಡುತ್ತ ತನ್ನ ನಿಜರೂಪವನ್ನು ಉಪಸಂಹರಿಸಿಕೊಂಡು, ಸುಂದರಬಾಲಕನ ರೂಪ ದಿಂದ ಉತ್ಸವದಲ್ಲಿ ಮಗ್ನರಾದ ಜನರ ಸಮೀಪಕ್ಕೆ ಹೋದನು.

ಶಬರರು ಆ ಹೊಸ ಬಾಲಕನ ಸುತ್ತಲೂ ಕುತೂಹಲದಿಂದ ಕೂಡಿ, "ನಂ ದೇವ್ರು, ತನಗಾಗಿ ಒಳ್ಳೇ ಚಂದದ ಹುಡುಗನ್ನ ಕಳಿಸಿದ್ದಾರ್ರೋಯ್" ಎಂದು ಹೇಳಿಕೊಂಡು, ಅವನನ್ನು ಎತ್ತಿಕೊಂಡು ಹೋಗಿ ಉತ್ಸವದ ಮಧ್ಯದಲ್ಲೇ ಇಳಿಸಿದರು.

ಅಲ್ಲಿ ರಕ್ತದ ಕಲೆಗಳಿಂದ ಕೂಡಿದ ದೊಡ್ಡ ದೊಂದು ಕರಿಗಲ್ಲು ಕಾಣುತ್ತಿತ್ತು. ಅದರ ಇದಿರಿನಲ್ಲಿ ಚಿಕ್ಕ ಹುಡುಗನೊಬ್ಬ ಮೂಕತನದಲ್ಲಿ ಅಳುತ್ತಿದ್ದನು. ಅವನ ಶರೀರಕ್ಕೆಲ್ಲಾ ಅರಸಿನ ಬಳಿದಿತ್ತು. ಸೊಂಟಕ್ಕೆ ಕಪ್ಪು ವಸ್ತ್ರವನ್ನು ಸುತ್ತಿದ್ದರು. ಕೊರಳಿಗೆ ಕೆಂಪು ಮಂದಾರ ಹೂವಿನ ಮಾಲೆ ಹಾಕಲಾಗಿತ್ತು. ಹಣೆಗೆ ಕುಂಕುಮದ ಮುದ್ದೆ.

ಬಾಲರೂಪದ ವಿಘ್ನೇಶ್ವರನು ಶಬರನಾಯಕನನ್ನು ನೋಡಿ, "ನಿಮ್ಮ ದೇವರ ಹತ್ತಿರ ನನಗೆ ಮಾತಾಡ ಬೇಕು. ನನ್ನನ್ನು ಅವನ ಬಳಿಗೆ ಕರೆದುಕೊಂಡು ಹೋಗಿ" ಎಂದನು.

ಆ ಮಾತನ್ನು ಕೇಳಿ ಶಬರ ನಾಯಕನು ಬೆಳ್ಳಗಿನ ಹಲ್ಲುಗಳನ್ನು ತೋರಿಸಿ ನಗುತ್ತ, "ಭಲೆಭಲೆ ಭಲೆ ಹುಡುಗಾ! ನಮ್ಮ ದೇವ್ರು, ಹಾತ್ರಾನೇ ಮಾತಾಡಿ ಬಿಟ್ಟೀಯೂ? ನಮ್ಮ ದೇವ್ರು ಕಾರು



ಕತ್ತಲಿನ ಹಾಗೆ ಮಹಾ ಭೀಕರರಾಗಿರುತ್ತಾರೇ! ಯಾರೂ ನೋಡಲಾರ್ರೂ! ನೋಡಿ ಗೀಡಿ ಬಿಟ್ಟರೆ ರಕ್ತ ಕಕ್ಕಿ ಹಾಗೇ ಬಿದ್ದು ಸಾಯ್ತಾರೇ!" ಎಂದು ಹೆದರಿಸಿದನು.

ವಿಘ್ನೇಶ್ವರನು ಪ್ರತಿಯಾಗಿ ನಗುತ್ತ, ಗುಡು ಗುಡು ಓಡುತ್ತಾ ಹೋಗಿ ಕರಿಯ ಶಿಲೆಯನ್ನು ಸಮೀಪಿಸಿ, ಶಬರ ನಾಯಕನನ್ನು ನೋಡಿ, "ನೀವೆಲ್ಲಾ ನಿಮ್ಮ ಭಯವನ್ನೇ ಈ ದೇವರಿಗೆ ಅಂಟಿಸಿ, ಇವನು ಭಯಂಕರವಾಗಿರುವನೆಂದು ಅಂದುಕೊಂಡಿದ್ದೀರಿ. ಭಯವನ್ನೇ ಭಕ್ತಿ ಅಂದು ಕೊಂಡಿದ್ದೀರಿ. ನಿಮ್ಮೊಳಗಿರುವ ಕ್ರೂರ ಸ್ವಭಾವವೇ ಬಲಿಗೊಡುವ ಕರ್ಮವಾಗಿ ರೂಪುಗೊಂಡಿತು. ಇದೆಲ್ಲಾ ದೊಡ್ಡ ತಪ್ಪು. ನೀವು ಯಾರೂ ನಿಮ್ಮ ಸ್ವಾಮಿಯನ್ನು ಈ ವರೆಗೂ ನೋಡಿಯೇ ಇಲ್ಲ. ನಿಮ್ಮ ಸ್ವಾಮಿ ಎಂದಿಗೂ ಇಂತಹ ಬಲಿಯನ್ನೂ ಉತ್ಸವವನ್ನೂ ಕೇಳಲಿಲ್ಲ. ನಿಮ್ಮ ಸ್ವಾಮಿ ತುಂಬಾ



ಅಂದಚೆಂದನಾದ ದೇವರು ಹೀಗೆ ಪ್ರಕಾಶಮಾನ ವಾಗಿರುತ್ತಾನೆ !" ಎಂದು ಹೇಳಿ ಅಂಗೈಯಿಂದ ಕರಿ ಶಿಲೆಯನ್ನು ತಟ್ಟಿದನು.

ಕಪ್ಪಗಿನ ಆ ಬಂಡೆಗಲ್ಲು ಬೆಳ್ಳಗಿನ ಬಾಳೇ ಹಾಳೆಗಳಿಂದ ಮಾಡಿದಂಥ ಸ್ವಾಮಿಯ ವಿಗ್ರಹವಾಗಿ ಮಾರ್ಪಟ್ಟಿತು. ಕಾಲ ಗಂಟುಗಳ ಮೇಲೆ ಎರಡು ಕೈಗಳನ್ನು ಚಾಚಿ ಕುಳಿತುಕೊಂಡ ಭಂಗಿಯಲ್ಲಿರುವ ಆ ಸ್ವಾಮಿಯ ವಿಗ್ರಹವು ನಗುಮೊಗದಿಂದ ಮನೋಹರವಾಗಿದ್ದಿತು. ಅನಂತರ ವಿಘ್ನೇಶ್ವರನು ಮೂಕಬಾಲಕನ ತಲೆಯನ್ನು ನೀವಿದನು.

ಕೂಡಲೇ ಆ ಹುಡುಗನು ಕೊರಳೆತ್ತಿ ಅಸ್ಖಲಿತ ವಾದ ವಾಣಿಯಿಂದ, "ಓ ಸ್ವಾಮಿ! ನೀನೇ ಶರಣಂ! ನಿನಗೇ ಶರಣಂ!" ಎಂದು ಧ್ವನಿಸಿ ವಿಗ್ರಹದ ಮುಂದೆ ಮುಂಡುಗಾಲೂರಿ ನಮಸ್ಕ ರಿಸುತ್ತ ಸ್ವಾಮಿಯ ಸ್ತೋತ್ರವನ್ನು ಪ್ರಾರಂಭಿಸಿದನು. ಶಬರರು ದಂಗುಬಡಿದು ನೋಡುತ್ತಿದ್ದರು.

ಕರಿಗಲ್ಲಿನ ಸ್ವಾಮಿ ಸುಂದರವಾದ ಬಿಳಿಯ ವಿಗ್ರಹ ಮೂರ್ತಿಯಾಗಿ ಬದಲಾಯಿಸುವುದೂ, ಮೂಕ ಹುಡುಗನು ಸ್ಪಷ್ಟ ಉಚ್ಚಾರದಿಂದ ಮಾತುಗ ಳನ್ನಾಡುವುದೂ ಕಣ್ಣು ಮುಚ್ಚಿ ಬಿಡಿಸುವುದ ರೊಳಗೆ ನಡೆದ ಸಂಭವಗಳು. ಈ ಅದ್ಭುತಗಳನ್ನು ನೋಡಿ, ಶಬರರು ಚಿತ್ರದ ಬೊಂಬೆಗಳಂತೆ ನಿಬ್ಬೆರ ಗಾಗಿ, ಕಡೆಗೆ ಮೆಲ್ಲಗೆ ಕೈಗಳನ್ನೆತ್ತಿ ವಿಘ್ನೇಶ್ವರನಿಗೆ ನಮಸ್ಕಾರ ಮಾಡಿದರು.

ಬಾಲಕನ ರೂಪದಲ್ಲಿದ್ದ ವಿಘ್ನೇಶ್ವರನು ತನಗೆ ನಮಸ್ಕರಿಸಬೇಡಿರೆಂದು ಕೈಗಳಿಂದ ನಿವಾರಿಸುತ್ತ. "ನೀವು ನನಗೆ ನಮಸ್ಕಾರಮಾಡುವುದಲ್ಲ. ನಿಮ್ಮ ದೇವರನ್ನು, ನಿಮ್ಮ ಸ್ವಾಮಿಯನ್ನು ಭಯಬಿಟ್ಟು ನಮಸ್ಕರಿಸಿ ಸೇವಿಸಿರಿ. ನೀವು ನಂಬಿದ ದೇವರನ್ನು ತಂದೆಯ ಹಾಗೆ, ಅಣ್ಣನಹಾಗೆ, ಸ್ನೇಹಿತನ ಹಾಗೆ ಭಾವಿಸಿರಿ. ರಕ್ತಪಾತ, ಬಲಿ, ಕೊಲೆ ಮೊದಲಾದ ಬೀಭತ್ಸಕರ ಕ್ರೂರಕರ್ಮಗಳನ್ನು ಬಿಟ್ಟು, ಫಲ ಪುಷ್ಪಗಳಿಂದ, ಬಾಳೆಯ ತೋರಣಗಳಿಂದ ತಣ್ಣಗಿನ ಆನಂದದಾಯಕವಾದ ಪೂಜೋತ್ಸವಗಳನ್ನುಮಾಡಿರಿ. ಈಗ ತಾನೇ ಮಾತುಬಂದ ಈ ಹುಡುಗನೇ ನಿಮಗೆ ಗುರುವಾಗಿಯೂ ಇರುತ್ತಾನೆ. ನಾನೀಗ ನಿಮ್ಮ ಸ್ವಾಮಿಯ ಬಳಿಗೆ ಹೋಗುತ್ತೇನೆ. ನಿಮ್ಮ ಸ್ವಾಮಿ ನಿಮಗೂ ದರ್ಶನ ಕೊಡುತ್ತಾನೆ." ಎಂದು ಹೇಳಿ ಬೇಗ ಬೇಗನೆ ಬೆಟ್ಟದ ಮೇಲೆ ಏರುತ್ತಾ ಹೋದನು.ಶಬರರು ಸ್ವಲ್ಪ ದೂರದ ವರೆಗೆ ಅವನನ್ನು ಅನುಸರಿಸಿ ಆಮೇಲೆ ಅಲ್ಲಿಯೇ ನಿಂತರು.

ವಿಘ್ನೇಶ್ವರನು ಓಡುತ್ತಾ ಬೆಟ್ಟದ ಶಿಖರವನ್ನು ತಲಪಿದನು. ಅಲ್ಲಿ ಭೈರವಸ್ವಾಮಿ ತಲೆ ತಗ್ಗಿಸಿಕೊಂಡು ಚಿಂತಿಸುತ್ತಾ ಕುಳಿತಿದ್ದನು. ಅವನ ಶರೀರವು ಕಪ್ಪಗಾಗಿದ್ದಿತು.

ವಿಘ್ನೇಶ್ವರನು "ಭೈರವಣ್ಣಾ!" ಎಂದು ಕೂಗಿ ಅವನ ಎರಡು ಕೈಗಳನ್ನೂ ಹಿಡಿದು ಆಲಿಂಗನ



ಮಾಡಿಕೊಂಡನು. ಮರುಕ್ಷಣದಲ್ಲಿ ಭೈರವನ ಕಾರ್ಗಪ್ಪಿನ ಶರೀರವು, ಬೆಳ್ಳಗೆ ಬೆಳುದಿಂಗಳ ಕಾಂತಿಯಿಂದ ಪ್ರಕಾಶಿಸಿತು.

ದಿವ್ಯಮಂಗಳರೂಪವನ್ನು ಹೊಂದಿದ ಭೈರವನು, ಬಾಲಕನನ್ನು ಅತ್ಯಾನಂದದಿಂದ ಆಲಿಂಗಿಸಿ, "ಆಹಾ! ನೀನು ವಿಘ್ನೇಶ್ವರನೇ ನಿಜ. ನನಗೆ ಗೊತ್ತು. ನಿನ್ನ ಅನುಗ್ರಹದಿಂದಲೇ ನನ್ನ ಕಪ್ಪು ಬಣ್ಣವು ಹೋಗಿ ದೈವತ್ವಬರುತ್ತದೆಂದು ನಾನು ಅವತರಿಸಿದಾಗಲೇ ಆಕಾಶವಾಣಿ ತಿಳಿಸಿತ್ತು. ಈ ಬೆಟ್ಟವನ್ನೇರಿ ಬರಲು ಯಾರೂ ಸಾಹಸ ಮಾಡಲಾರರು. ನನ್ನನ್ನು ನೋಡಿ ಪಕ್ಷಿಗಳೂ ಹೆದರಿ ಶಬ್ದ ಮಾಡುವುದಿಲ್ಲ. ನನ್ನನ್ನು ನಾನೇ ಅಸಹ್ಯಪಟ್ಟುಕೊಳ್ಳುತ್ತ, ನಿನಗಾಗಿ ಎಷ್ಟೋ ಕಾಲದಿಂದ ನಿರೀಕ್ಷಿಸಿಕೊಂಡಿದ್ದೇನೆ. ನಿನ್ನ ನಿಜರೂಪದಿಂದ ನನ್ನ ಕಣ್ಣುಗಳಿಗೆ ಹಬ್ಬಮಾಡು!" ಎಂದನು.

ಕೂಡಲೇ ವಿಘ್ನೇಶ್ವರನು ನಿಜರೂಪದಿಂದ ಪ್ರತ್ಯಕ್ಷವಾಗಿ ಅವನೊಂದಿಗೆ: "ನೋಡಣ್ಣಾ. ಇಂದಿನಿಂದ ನೀನು ಈ ದಿವ್ಯರೂಪದಲ್ಲಿ ದೈವವಾಗಿ ಆರಾಧಿಸಲ್ಪಡುವ ಸ್ವಾಮಿಯಾಗು. ಶಿವಕೇಶವರಿಬ್ಬರ ಅಂಶವೂ ನಿನ್ನಲ್ಲಿದೆ. ನಿನ್ನ ಜನ್ಮವನ್ನು ಕುರಿತು ಅಮ್ಮ ನನಗೆ ಎಲ್ಲಾ ಸಂಗತಿ ಹೇಳಿದ್ದಾಳೆ. ಅಂದಿನಿಂದಲೂ ನಿನ್ನನ್ನು ನೋಡಬೇಕೆಂದು ಆತುರಪಡುತ್ತಲೇ ಇದ್ದೆ. ಅಮ್ಮ ನನ್ನನ್ನು ತುಂಬಾ ಹೆದರಿಸಿದಳು. ನಿನ್ನ ಮುಖ ಕಗ್ಗತ್ತಲೆಯ ಗವಿಯ ಹಾಗಂತೆ. ಶಿವವಿಷ್ಣುಗಳ ತೇಜಸ್ಸು ಒಂದಾಗಿ ಕೂಡಿ ನಿನ್ನ ಅವತರಣವಾಯಿತಂತೆ. ಅದು ಯಾರಿಗೂ ಕಾಣದಂತಿರಲು ನಿನಗೆ ಕಪ್ಪನೆಯ ರೂಪ ಬಂತಂತೆ. ಈಗ ನೋಡಿದಿಯಾ? ನಿನ್ನಂಥಾ ದಿವ್ಯಮಂಗಳ ಸುಂದರನಾದ ಸ್ವಾಮಿ ಬೇರೊಬ್ಬನಿಲ್ಲ. ನಿನ್ನನ್ನು ಭಕ್ತಿಯಿಂದ ಸೇವಿಸುವ ಶಬರರಿಗೆ ಒಮ್ಮೆ ದರ್ಶನ ಕೊಟ್ಟುಬಿಡು." ಎಂದು ಹೇಳಿದನು.

ಆಮೇಲೆ ವಿಘ್ನೇಶ್ವರನು ಬಾಲಕನ ರೂಪದಲ್ಲಿ ಶಬರರ ಬಳಿಗೆ ಬಂದು, "ನೀವೆಲ್ಲರೂ ನಿಮ್ಮ ಸ್ವಾಮಿಯ ಬಿಳಿಯ ಶಿಲಾವಿಗ್ರಹದ ಮುಂದೆ ಅಡ್ಡಬಿದ್ದು ಏಕ ಕಂಠದಿಂದ ಸ್ವಾಮಿಯೇ ಶರಣಂ ಎಂದು ಕೂಗಿಕೂಗಿ ಕರೆಯಿರಿ. ನಿಮ್ಮ ಸ್ವಾಮಿ ನಿಮಗೆ ದರ್ಶನ ಕೊಡುತ್ತಾನೆ. ಕರೆದಾಗಲೆಲ್ಲಾ ಓಗೊಡುತ್ತಾನೆಂದು ತಿಳಿಯಿರಿ. ಕಾಡು ಜೀವನವನ್ನು ಬಿಟ್ಟು ವ್ಯವಸಾಯ ಮಾಡಿರಿ. ಪೈರು ಪಚ್ಚೆಗಳನ್ನು ಏರ್ಪಡಿಸಿಕೊಂಡು ಮನುಷ್ಯರಾಗಿ ಜೀವಿಸಿರಿ. ನಿಮ್ಮ ಸ್ವಾಮಿಯ ಬೆಂಗಾವಲೂ ರಕ್ಷಣೆಯೂ ಯಾವಾಗಲೂ ನಿಮಗಿರುತ್ತದೆ" ಎಂದು ಹೇಳಿ ಅದೃಶ್ಯನಾಗಿ ಹೋದನು.

ಆಗ ತಾನೇ ಅವನು ಸಾಮಾನ್ಯ ಬಾಲಕನಲ್ಲವೆಂದೂ ತಮ್ಮನ್ನು ಜ್ಞಾನಬೋಧೆಯಿಂದ ಉದ್ಧರಿಸಲಿಕ್ಕಾಗಿ ಬಂದ ದೇವನೆಂದೂ ಶಬರರಿಗೆ ತಿಳಿಯಿತು. ಅವನು ಹೇಳಿದಂತೆಯೇ ಶಬರರು ಬೆಳ್ಳಗಾಗಿ




ಹೊಳೆಯುವ ವಿಗ್ರಹದ ಮುಂದೆ ಅಡ್ಡ ಬಿದ್ದು ಬಾಯಿ ತುಂಬ ಸ್ವಾಮಿಯನ್ನು ಕರೆಯುತ್ತ ಭಕ್ತಿ ಪರವಶರಾದರು. ಆಗ ದಿವ್ಯಸುಂದರ ರೂಪದಲ್ಲಿ ಸ್ವಾಮಿ ಅವರ ಮುಂದೆ ಸಾಕ್ಷಾತ್ಕರಿಸಿ ಕಿರುನಗುವಿನೊಂದಿಗೆ ಅಭಯಮುದ್ರೆಯಿಂದ ಅವರನ್ನೆಲ್ಲ ಆಶೀರ್ವದಿಸಿ ಅಂತರ್ಧಾನನಾದನು.

ಅಂದಿನಿಂದಲೇ ಶಬರರು ಪ್ರತಿವರ್ಷವೂ ಮಾರ್ಗಶಿರಮಾಸದಲ್ಲಿ ಬಾಳೆಯಬೆಂಡು ಹಾಳೆಗಳಿಂದ, ಎಳೆಯ ಬಾಳೆಯೆಲೆಯ ಸೀಳುಗಳಿಂದ, ವಿವಿಧ ವಿನ್ಯಾಸಗಳಲ್ಲಿ ಸ್ವಾಮಿಗೆ ಮಂಟಪಗಳನ್ನೂ, ಚಪ್ಪರ ತೋರಣಗಳನ್ನೂ ಕಟ್ಟಿ ಅಲಂಕಾರಮಾಡಿ, ಪೂಜಿಸ ತೊಡಗಿದರು. ಬಲಿ ಮೊದಲಾದ ಬೀಭತ್ಸ ಕ್ರಮಗಳೇನಿಲ್ಲದೆ, ಸಾತ್ವಿಕಾರಾಧನೆಗಳಿಂದ, ಭಯವಿಲ್ಲದ ಸದ್ಭಕ್ತಿಯಿಂದ ವಿದ್ಯಾವಂತರಾಗಿ ಒಳ್ಳೆಯ ಮಾನವತೆಯನ್ನು ಸಾಧಿಸುತ್ತ ಧನ್ಯರಾಗುತ್ತ ಬಂದರು. ಸ್ವಾಮಿಯ ನಿವಾಸಸ್ಥಾನವಾದ ಬೆಟ್ಟದ ಮೇಲೆ, ಶಿಲ್ಪಕಲೆಗಳಿಂದ ಕೂಡಿದ ದೊಡ್ಡದೊಂದು ಆಲಯವನ್ನು ಕಟ್ಟಿದರು. ಉತ್ಸವಕಾಲದಲ್ಲಿ ಸ್ವಾಮಿಯ ಮುಂದೆ ಸಂಗೀತ ನೃತ್ಯ ಕವಿತೆಗಳು ಆನಂದದ ಒರತೆಗಳಾಗಿ ಹರಿಯ ತೊಡಗಿದುವು. ಆ ಬೆಟ್ಟಕ್ಕೆ ಶಬರಮಲೆ ಎಂಬ ಹೆಸರು ಪ್ರಸಿದ್ಧವಾಯಿತು.

ಬಾಲಕನ ರೂಪದಲ್ಲಿ ಬಂದು ಇಷ್ಟೆಲ್ಲಾ ಮಾರ್ಪಾಟು ಮಾಡಿದವನು ಯಾವ ದೇವರೆಂಬುದು ಶಬರರಿಗೆ ಗೊತ್ತಿರಲಿಲ್ಲ. ತಮ್ಮ ಸ್ವಾಮಿಯೇ ಆ ರೂಪದಲ್ಲಿ ಬಂದು ತಮ್ಮ ಅಜ್ಞಾನವನ್ನು ತೊಲಗಿಸಿ ಅನುಗ್ರಹಿಸಿದನೆಂದೇ ತಿಳಿದರಲ್ಲದೆ, ಇದು ವಿಘ್ನೇಶ್ವರನ ಲೀಲೆ ಎಂದು ತಿಳಿಯಲಿಲ್ಲ. ಹಾಗೆ ತಿಳಿದಿದ್ದರೆ ಶಬರರು ಆ ಸ್ವಾಮಿಯನ್ನು ಬಿಟ್ಟು ವಿಘ್ನೇಶ್ವರನನ್ನೇ ತಮ್ಮ ದೇವರೆಂದು ಆರಾಧಿಸಲು ತೊಡಗಿ, ಭೈರವಸ್ವಾಮಿಯನ್ನು ಮರೆತುಬಿಡುತ್ತಿದ್ದರು. ಈ ಸಂಗತಿಯನ್ನು ಅರಿತುಕೊಂಡಿದ್ದ ಭೈರವಸ್ವಾಮಿ ಪದೇ ಪದೇ ವಿಘ್ನೇಶ್ವರನನ್ನು ಸ್ಮರಿಸುತ್ತಾ ಮನಸಾರೆ ವಂದಿಸಿಕೊಂಡಿದ್ದನು. ತಾನು ಕೈಲಾಸಕ್ಕೆ ಹೋಗಿ ವಿಘ್ನೇಶ್ವರನೊಂದಿಗೂ, ಕುಮಾರಸ್ವಾಮಿಯೊಂದಿಗೂ ತನ್ನ ಆನಂದವನ್ನು ಹಂಚಿಕೊಳ್ಳಬೇಕೆಂದು ಅವನಿಗೆ ಆಗಾಗ ತೋರುತ್ತಿತ್ತು.

ವಿಘ್ನೇಶ್ವರನು ಶಬರರನ್ನು ಸಂಸ್ಕರಿಸಿ ಮೂಷಿಕವಾಹನನಾಗಿ ಆಕಾಶಮಾರ್ಗದಿಂದ ಕೆಳಗೆ ನೋಡುತ್ತಾ ಉತ್ತರದಿಶೆಗಾಗಿ ಪ್ರಯಾಣ ಮಾಡುತ್ತಿದ್ದನು. ಈ ದಕ್ಷಿಣದಲ್ಲಿ ಕಾಣುವ ಬೆಟ್ಟಗಳ ಇಳಿಜಾರಿನಲ್ಲೆಲ್ಲಾ ದಟ್ಟವಾದ ಅರಣ್ಯಗಳೇ ತುಂಬಿಕೊಂಡಿದ್ದುವು. ಭೂಭಾಗವು ಖಾಲಿಯಾಗಿ ಬಂಜರು ಬಿದ್ದ ಮೈದಾನದ ಹಾಗೆ ಕಾಣುತಿತ್ತು. ಬೇಕಾದಷ್ಟು ಜಲಸಮೃದ್ಧಿ ಇರುತ್ತಿದ್ದರೆ ಭೂಮಿ ಪೈರು ಪಚ್ಚೆಗಳಿಂದ ಕಂಗೊಳಿಸುತ್ತಿತ್ತು. ಆದರೆ ನೀರಿನ ಕೊರತೆ

ಯನ್ನು ತೀರಿಸಬೇಕಾಗಿದ್ದ ನದಿಗಳು ಎಲ್ಲಿಯೂ ಕಾಣಲಿಲ್ಲ. ಇರುವ ಪ್ರಜೆಗಳು ಆಕಾಶದಲ್ಲಿ ಕಾಣುವ ಮೋಡಗಳನ್ನು ನಂಬಿಕೊಂಡು ಹೇಗೋ ಜೀವನ ಯಾತ್ರೆ ಮಾಡುತ್ತಿದ್ದರು.

ಆಗ ಅಲ್ಲಿಯ ಜನರು ಹೇಳಿಕೊಳ್ಳುವ ಕೆಲವು ಮಾತುಗಳೂ ವಿಘ್ನೇಶ್ವರನ ದೊಡ್ಡ ಕಿವಿಗಳಲ್ಲಿ ಬಿದ್ದುವು:

"ಗಂಗೆಯಂಥ ಜೀವನದಿಗಳಿಂದ ಕೂಡಿದ ಉತ್ತರದೇಶದ ಪ್ರಜೆಗಳು ಎಷ್ಟು ಪುಣ್ಯಮಾಡಿ ಹುಟ್ಟಿದರೋ ಏನೋ! ಅಷ್ಟು ದೊಡ್ಡ ಗಂಗಾ ನದಿಯಂತಹುದು ನಮಗೇನೂ ಇಲ್ಲದಿದ್ದರೂ, ಯಾವ ದೇವರಾದರೂ ಇತ್ತಕಡೆ ಹರಿಯುವಂತೆ ಮಾಡಬಾರದೇ? ಮೂರು ಕೋಟಿ ದೇವತೆಗಳು ಇದ್ದಾರಂತೆ. ಯಾರಿಗೂ ಕರುಣೆಯಿಲ್ಲ. ಒಳ್ಳೆಯದಕ್ಕೆ ಮನಸ್ಸು ಕೊಡುವುದಿಲ್ಲ. ಮತ್ತೇಕೆ ಆ ದೇವತೆಗಳು?"

ಅತ್ತ ಪಡುವಣ ದಿಕ್ಕಿನಲ್ಲಿ ಎತ್ತರವಾದ ಪರ್ವತ ಶ್ರೇಣಿಗಳು, ಇತ್ತ ಮೂಡು ದಿಕ್ಕಿನಲ್ಲಿ ಸಣ್ಣಸಣ್ಣ ಬೆಟ್ಟದ ಸಾಲಿನ ಬದಿಯ ಭೂಭಾಗಗಳು ವಿಶಾಲ ವಾಗಿದ್ದು ಸಮುದ್ರದ ವರೆಗೂ ಸುಮ್ಮನಿವೆ. ಹೆಚ್ಚಿನ ಜನರು ಪ್ರಾಣಿಗಳನ್ನೂ ಪಕ್ಷಿಗಳನ್ನೂ ಬೇಟೆಯಾಡಿ ತಿನ್ನುತ್ತ ಜೀವನ ಕಳೆಯುತ್ತಿದ್ದಾರೆ. ಪ್ರಾಣಭೀತಿ ಯಿಲ್ಲದೆ ಸಮುದ್ರದಲ್ಲಿ ಸಾಗಿ ಮೀನು ಹಿಡಿದು ಬದುಕುವ ಬೆಸ್ತರು ಅನೇಕರಿದ್ದಾರೆ. ಸರಿಯಾದ ಮೇವಿಲ್ಲದೆ ಪಶುಗಣಗಳು ಸೊರಗಿ ದೈನ್ಯತೆಗೆ ಪಾತ್ರವಾಗಿವೆ. ಪೂರ್ವತೀರದ ಉದ್ದಕ್ಕೂ ಬೆಸ್ತರ ಹಳ್ಳಿಗಳೇ. ಮೀನುಗಾರರೇ.

ಈ ಭೂಮಿಯನ್ನು ಉತ್ತರದ ಭೂಮಿಯೊಂದಿಗೆ ಹೋಲಿಸುವಾಗ ವಿಘ್ನೇಶ್ವರನಿಗೆ ಚಿಂತೆಯಾಯಿತು. ಹಿಮಾಚಲ ಸೀಮೆಯಲ್ಲಿ ಎಲ್ಲಿ ನೋಡಿದರೂ ಸುಂದರ ಜಲಪಾತಗಳು; ರಮಣೀಯವಾದ ಸರೋವರಗಳು, ನದಿಗಳು, ಕೆರೆಕೊಳಗಳೆಲ್ಲ ಆನಂದ ದಾಯಕವಾಗಿವೆ. ಪ್ರಕೃತಿ ಹಸಿರಾಗಿದೆ. ಆದರೆ ಇಲ್ಲಿಯ ಪಶ್ಚಿಮ ಬೆಟ್ಟಗಳು ದೃಷ್ಟಿ ಬೊಂಬೆಗಳ ಹಾಗೆ ಬೋಳಾಗಿವೆ.

ಆ ಪರ್ವತಶ್ರೇಣಿಯ ನಡುವೆ ಸಹ್ಯಾದ್ರಿಯ ಕಣಿವೆಯಲ್ಲಿ ಗೌತಮನ ಆಶ್ರಮವು ಇದ್ದಲಿಯು ಗುಂಪಿನಲ್ಲಿರುವ ಮರಕತದಹಾಗೆ ಹಸಿರಾಗಿ ಹೊಳೆ ಯುತ್ತಿದ್ದಿತು. ವಿಘ್ನೇಶ್ವರನು ಏನೋ ಯೋಚಿ ಸುತ್ತ ಬಗ್ಗಿ ನೋಡಿದನು. ಬೇಗ ಹಾರಿ ಹೋಗುವಂತೆ ಇಲಿಗೆ ಎಚ್ಚರಿಸಿ, ದಾಕ್ಷಿಣಾತ್ಯದ ವಿಂಧ್ಯವನ್ನು ದಾಟಿ ಉತ್ತರಕ್ಕೆ ಹೋದನು. ಆ ಭಾಗವೆಲ್ಲಾ ಈಗ ಹೊಸರೀತಿಯಾಗಿರುವಂತೆ ತೋರಿತು. ಸಮೀಪ ಹೋದಹಾಗೆ ಏನೋ ವಿಪರೀತವಾದ ಅಯೋಮಯದಂಥ ಪರಿಸ್ಥಿತಿಯನ್ನು ನೋಡಿದನು.






## ೬

ಜುರೇಕನ ಚಿಂತೆಯನ್ನು ನೋಡಿ ಹಸನ್ ಸಣ್ಣಗೆ ನಗುತ್ತ, "ಅವಸರಪಡಬೇಡಿ. ನಿಮಗೆ ನಿಮ್ಮ ಹಣದ ಚೀಲ ದೊರಕುತ್ತದೆ. ನಿಮ್ಮ ಹುಡುಗನೂ ದೊರಕತ್ತಾನೆ. ನೀವು ದೊಡ್ಡ ಮನಸ್ಸುಮಾಡಿ, ನಮ್ಮ ಹುಡುಗ ಪಾದರಸ ಅಲೀಗೆ ನಿಮ್ಮ ಸೊಸೆ ಜೀನಾಬಳನ್ನು ಕೊಟ್ಟು ಮದುವೆಗೆ ಮುಹೂರ್ತ ವಿಟ್ಟು, ಮತ್ತೆ ಹೋಗಿರಿ! ಒಪ್ಪುವಿರಾ?" ಎಂದನು.

"ನಮ್ಮ ಜೀನಾಬಳನ್ನು ನಿಮ್ಮ ಅಲೀಗೆ ಕೊಟ್ಟು ಮದುವೆಮಾಡಲು ನನಗೇನೂ ಅಭ್ಯಂತರವಿಲ್ಲ. ಆದರೆ ಜೀನಾಬಳನ್ನು ಸಂತೆಯಲ್ಲಿ ಕೊಂಡುಕೊಳ್ಳುವ ಹಾಗೆ ಕೊಂಡುಕೊಳ್ಳಲು ಅವಳು ಮೇಕೇ ಮರಿಯಲ್ಲ. ಅವಳನ್ನು ಮದುವೆಯಾಗುವವನು ಕನ್ಯಾಶುಲ್ಕದ ಭರಣ ಕೊಡಬೇಕಾಗುತ್ತದೆ," ಎಂದನು ಜುರೇಕ್.

"ಅಷ್ಟೇ ತಾನೇ ? ತಪ್ಪದೆ ಕೊಡುತ್ತೇನೆ. ಏನು ಕೊಡಬೇಕು ?" ಎಂದನು ಪಾದರಸ.

"ಅಜರಯ್ಯನ ಮಗಳು ಕಮರಳ ಹತ್ತಿರವಿರುವ ಬಂಗಾರದ ದುಪಟಿ, ಬಂಗಾರದ ಶಿಖಾಭರಣ, ಬಂಗಾರದ ಒಡ್ಯಾಣ, ಬಂಗಾರದ ಚಡಾವು ಇವಿಷ್ಟನ್ನು ತಂದುಕೊಡುವವನನ್ನು ಮದುವೆ ಮಾಡಿಕೊಳ್ಳ ಬೇಕೆಂಬುದು ಜೀನಾಬಳ ಅಭಿಪ್ರಾಯ. ಅವುಗಳನ್ನು ನೀನು ತಂದು ಕೊಟ್ಟೆಯಾದರೆ, ಮದುವೆಗೆ ನನ್ನ ಅಭ್ಯಂತರವಿಲ್ಲ" ಎಂದನು ಜುರೇಕ್.

"ಖಂಡಿತಾ ತರುತ್ತೇನೆ" ಎಂದನು ಪಾದರಸ ಅಲೀ.

ಆಮೇಲೆ ಜುರೇಕ್ ತನ್ನ ಮಗನನ್ನೂ, ಹಣದ ಚೀಲವನ್ನೂ ತೆಗೆದುಕೊಂಡು ಹೋದನು. ಆಗ ಹಸನ್ ಪಾದರಸನನ್ನು ನೋಡಿ, "ನಿನಗೇನಾದರೂ ಹುಚ್ಚು ಹಿಡಿಯಿತೇನು ? ಇಂತಹ ಕೆಲಸ ಏಕೆ ಮೈಮೇಲೆ ಹಾಕಿಕೊಂಡೆ ? ಅಜರಯ್ಯ ಯಾರೆಂದು ಕೊಂಡೆ ? ಮಂತ್ರಗಾರ, ಕೈಮಾಸು ವಿದ್ಯೆ ತಿಳಿದವನು. ಅವನೊಂದಿಗೆ ಭೂತಪಿಶಾಚಿಗಳೆಲ್ಲ ಮಾತಾಡುತ್ತವೆ. ಅವನು ಬಾಗ್ದಾದ್ ನಗರದ ಗೋಡೆಗಳ ಹೊರಗೆ ಬೆಳ್ಳಿ ಬಂಗಾರದ ಇಟ್ಟಿಗೆಗಳಿಂದ ಕಟ್ಟಿದ ಭವನದಲ್ಲಿ ಇರುತ್ತಾನೆ. ರಾತ್ರಿಯ ಹೊತ್ತಿನಲ್ಲಿ ಅವನು ಮನೆಯಲ್ಲಿರುವಾಗ ಹೊರತು ಆ ಮನೆ ಯಾರಿಗೂ ಕಾಣಲಾರದು. ಹಗಲೆಲ್ಲಾ ಅವನು ನಗರದಲ್ಲಿ ಬಡ್ಡೀವ್ಯಾಪಾರ ಮಾಡಿಕೊಂಡಿರುತ್ತಾನೆ.

ರಾತ್ರಿಯಾಗುವಾಗ ಮನೆಗೆ ಹೋಗಿ ಕಟಕಿಯಲ್ಲಿ ನಿಂತುಕೊಂಡು ತನ್ನ ಮಗಳ ಬಂಗಾರದ, ದುಪಟಿ ಮೊದಲಾದುವನ್ನೆಲ್ಲ ಒಂದು ಬಂಗಾರದ ಹರಿವಾಣ ದಲ್ಲಿಟ್ಟು ನಿಂತುಕೊಂಡು, ಇರಾಕ್ ಇರಾನ್ ಅರೇಬಿಯಾ ದೇಶದಲ್ಲಿರುವ ಎಂಥಾ ಚೋರಶಿಖಾ ಮಣಿಯಾದರೂ ಸರಿಯೇ, ಇದನ್ನು ಕದ್ದುಕೊಳ್ಳಿರಿ, ನೋಡುತ್ತೇನೆ, ಎಂದು ಗಟ್ಟಿಯಾಗಿ ಹೇಳುವನು. ಎಷ್ಟೋಮಂದಿ ಕಳ್ಳರು ಅವುಗಳನ್ನು ಕದಿಯಲು ಪ್ರಯತ್ನಿಸಿ ನಾಶವಾಗಿ ಹೋದರು. ಅವರ ಹಾಗೆ ನಿನ್ನನ್ನು ಕೂಡಾ ನಾಶಮಾಡಬೇಕೆಂಬ ದುರುದ್ದೇಶ ದಿಂದಲೇ ಜುರೇಕ್ ನಿನ್ನನ್ನು ಕೆರಳಿಸಿಟ್ಟಿದ್ದಾನೆ. ಈ ಕೆಲಸ ನಿನ್ನಿಂದಾಗುವುದಂತೂ ಇಲ್ಲ !" ಎಂದನು.

"ತರುತ್ತೇನೆಂದು ಹೇಳಿಯಾಯಿತು. ಜೀನಾಬ್ ಮದುಮಗಳಾಗುವಾಗ ಆ ಬಂಗಾರದ ದುಪ್ಪಟಿ ಹೊದ್ದು, ಬಂಗಾರದ ಶಿಖಾಭರಣದಿಂದ ಆಲಂಕೃತಳಾಗಿ, ಬಂಗಾರದ ಒಡ್ಯಾಣ ಕಟ್ಟಿಕೊಂಡು, ಬಂಗಾರದ ಚಡಾವು ಮೆಟ್ಟಿಕೊಂಡು ನನ್ನ ಮುಂದೆ ಬರಲೇಬೇಕು. ಏನು ಬೇಕಾದರೂ ಆಗಲಿ !" ಎಂದನು ಪಾದರಸ ಧೈರ್ಯದಿಂದ.

ಅವನನ್ನು ಯಾರೂ ತಡೆಯಲಾರದೆ ಹೋದರು. ಅವನು ಅತ್ಯುತ್ಸಾಹದಿಂದ ಆಗಲೇ ಹೊರಟು ಅಜರಯ್ಯನ ಅಂಗಡಿಗೆ ಹೋದನು. ಅಜರಯ್ಯ ಬಂಗಾರವನ್ನು ತೂಕಮಾಡಿ, ಚೀಲಗಳಲ್ಲಿ ತುಂಬಿಸಿ ಕತ್ತೆಗಳ ಮೇಲೆ ಹೇರಿಕೊಂಡಿದ್ದನು. ಅಜರಯ್ಯನು ಅಂಗಡಿಯನ್ನು ಮುಚ್ಚಿ ಕತ್ತೆಯ ಮೇಲೆ ಸವಾರಿ ಕುಳಿತು ಮನೆಗೆ ಹೊರಡುವ ವರೆಗೂ, ಅಲೀ ಪಾದರಸನು ದೂರದಲ್ಲಿ ಕಾದುಕೊಂಡಿದ್ದು, ಆಮೇಲೆ ಅವನ ಹಿಂದೆಯೇ ಹೊರಟನು.

ಅಜರಯ್ಯನು ಊರಹೊರಗಿನ ಒಂದು ಸ್ಥಳದಲ್ಲಿ ನಿಂತು, ತನ್ನ ಚೀಲದೊಳಗಿನಿಂದ ಒಂದು ಮುಷ್ಟಿ ಮರಳನ್ನು ತೆಗೆದು ಗೊಣಗೊಣನೆ ಮಂತ್ರೋಚ್ಚಾರ ಮಾಡಿ ಗಾಳಿಯಲ್ಲಿ ಚೆಲ್ಲಿದನು. ಕೂಡಲೇ ಅವನ ಇದಿರಿನಲ್ಲಿ ದೊಡ್ಡದೊಂದು ಭವನವು ಪ್ರತ್ಯಕ್ಷ ವಾಯಿತು. ಆ ಭವನವು ಬಂಗಾರದ ಮತ್ತು



ಬೆಳ್ಳಿಯ ಇಟ್ಟಿಗೆಗಳಿಂದ ಅದ್ಭುತ ಸುಂದರವಾಗಿ ಕಟ್ಟಲ್ಪಟ್ಟಿತ್ತು. ಅಜರಯ್ಯ ಕತ್ತೆಯ ಮೇಲೆ ಕುಳಿತು ಕೊಂಡೇ ಭವನದ ಬಾಗಿಲಿನೊಳಗೆ ಪ್ರವೇಶ ಮಾಡಿದನು.

ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಕಿಟಕಿಯನ್ನು ತೆರೆದು, ಬಂಗಾರದ ಹರಿವಾಣದಲ್ಲಿ ಬಂಗಾರದ ದುಪಟಿ ಮೊದಲಾದುವನ್ನಿಟ್ಟು ಕೈಯಲ್ಲಿ ಹಿಡಿದು ನಿಂತುಕೊಂಡು ಕಿಟಕಿಯ ಹೊರಗೆ ತೋರಿಸುತ್ತ, "ಇರಾಕ್ ಇರಾನ್ ಅರೇಬಿಯಾ ದೇಶಗಳಲ್ಲಿರುವ ಚೋರಶಿಖಾಮಣಿಗಳೇ! ನಿಮ್ಮಿಂದಾದರೆ ನನ್ನ ಮಗಳ ಈ ಸೊತ್ತನ್ನು ಅಪಹರಿಸಿ ಅವಳನ್ನು ಮದುವೆಯಾಗಿರಿ" ಎಂದನು ಗಟ್ಟಿಯಾಗಿ.

ಅಲೀ ಆಲೋಚನೆ ಮಾಡಿದನು. ಅಜರಯ್ಯನ ಹತ್ತಿರ ಹೋಗಿ, ಒಳ್ಳೆಯ ಮಾತಿನಲ್ಲಿ ಕೇಳಿ ಆ ವಸ್ತುಗಳನ್ನು ಬಹುಮಾನವಾಗಿ ಪಡೆಯ ಬೇಕೆಂದು ನಿಶ್ಚಯಿಸಿಕೊಂಡನು. ಅಂತಲೇ ಅವನು ಭವನದ ಕೆಳಗೆ ಅಜರಯ್ಯನ ಮುಂದೆ ನಿಂತು, "ಅಯ್ಯಾ, ನಿಮ್ಮ ಹತ್ತಿರ ಒಂದು ಮಾತು ಕೇಳ ಬೇಕಾಗಿದೆ" ಎಂದನು ವಿನಯದಿಂದ. "ಮೇಲೆ ಬಾ" ಎಂದನು ಅಜರಯ್ಯ.

ಪಾದರಸನು ಮೇಲೆ ಬಂದು ಅಜರಯ್ಯನನ್ನು ನೋಡಿ ಜೇನಾಬಳೊಂದಿಗೆ ತನ್ನ ಮದುವೆಯ ವಿಷಯವನ್ನು ಕುರಿತು ಹೇಳಿ, ತನಗೆ ಬೇಕಾದ ಆ ವಸ್ತುಗಳನ್ನು ಕೊಟ್ಟು ಪುಣ್ಯ ಕಟ್ಟಿಕೊಳ್ಳ ಬೇಕೆಂದು ಕೇಳಿದನು. ಎಲ್ಲವನ್ನೂ ಕೇಳಿ ಅಜರಯ್ಯ ಗಟ್ಟಿಯಾಗಿ ನಕ್ಕು, ಪಾದರಸನ ಕೈಯ್ಯನ್ನು ಹಿಡಿದು ಪರೀಕ್ಷಿಸಿ. "ಲೋ! ಪೋರಾ! ನಿನಗೆ ಜೀವದ ಮೇಲೆ ಆಶೆ ಇದ್ದರೆ, ನನ್ನ ಮಾತು ಕೇಳಿ ಈ ಪ್ರಯತ್ನ ಬಿಟ್ಟುಬಿಡು. ಯಾರೋ ನಿನಗೆ ಕೇಡುಮಾಡಲು ಈ ಸಲಹೆ ಹೇಳಿದ್ದಾರೆ. ನನ್ನ ಆಯುಷ್ಯಕ್ಕಿಂತ ನಿನಗೆ ಆಯುಷ್ಯ ಹೆಚ್ಚಾಗಿದೆ. ಇಲ್ಲದಿದ್ದರೆ ನಿನ್ನನ್ನು ಈ ಕ್ಷಣದಲ್ಲಿ ಕೊಲ್ಲುತ್ತಿದ್ದೆ! ಓಡಿಬಿಡು!" ಎಂದನು.

ಪಾದರಸ ಅಲೀ ಒಮ್ಮೆಗೇ ಕೋಪಗೊಂಡೆದ್ದು, "ದುಷ್ಟಾ! ನಾನು ಕೇಳಿದ್ದು ಕೊಡದಿದ್ದರೆ ಈ ಕ್ಷಣದಲ್ಲಿ






ನಿನ್ನನ್ನು ಕೊಲ್ಲುತ್ತೇನೆ ! ನಾನು ಎಲ್ಲದಕ್ಕೂ ಸಿದ್ಧನಾಗಿ ಬಂದವನು !" ಎಂದು ಗರ್ಜಿಸಿ ಕತ್ತಿ ಹಿರಿದನು.

"ಆ ಕೈ ಬಿದ್ದು ಹೋಗಲಿ, ಹುಂ ಖಡಾಕ್ !" ಎಂದನು ಅಜರಯ್ಯ. ಮರುಕ್ಷಣದಲ್ಲಿ ಕತ್ತಿ ಹಿಡಿದ ಪಾದರಸನ ಬಲಗೈ ಮರಗಟ್ಟಿ ಹೋಯಿತು. ಪಾದರಸನು ಕತ್ತಿಯನ್ನು ಎಡದ ಕೈಯಲ್ಲಿ ತೆಗೆದು ಕೊಂಡನು. ಅಜರಯ್ಯನ ಮಂತ್ರದಿಂದ ಅದೂ ಮರಗಟ್ಟಿ ಹೋಯಿತು.

"ಈಗಾದರೂ ನಿನ್ನ ಪ್ರಯತ್ನವನ್ನು ಬಿಡು ವೆಯಾ ?" ಎಂದು ಕೇಳಿದನು ಅಜರಯ್ಯ.

"ನನಗೆ ಆ ದುಪಟಿಯೂ ಆಭರಣಗಳೂ ಬೇಕೇ ಬೇಕು !" ಎಂದನು ಪಾದರಸ.

"ಅದಕ್ಕೆ ಒಂದೇ ಮಾರ್ಗ ! ಕತ್ತೆಯಾಗಿ ಅವು ಗಳನ್ನು ಹೊರು !" ಎಂದು ಅಜರಯ್ಯ ಪಾದರಸನ ಮೇಲೆ ಮಂತ್ರದ ನೀರನ್ನು ಚಲ್ಲಿದನು. ಕೂಡಲೇ ಅಲೀಪಾದರಸನು ಕತ್ತೆಯಾಗಿ ಕೂಗಿದನು.

ಮರುದಿನ ಅಜರಯ್ಯ ಅಂಗಡಿಗೆ ಹೋಗುವಾಗ ಕತ್ತೆಯಾದ ಪಾದರಸನನ್ನು ಹೊಡೆದುಕೊಂಡು ಹೋದನು, ಆದಿನ ಸಾಯಂಕಾಲ ಮನೆಗೆ ಬಂದ ಮೇಲೆ, ಅಜರಯ್ಯ ಅಲೀಯನ್ನು ಮತ್ತೆ ಮನುಷ್ಯ ನನ್ನಾಗಿ ಮಾಡಿ, "ಏಕೆ ಹಾಳಾಗಿ ಹೋಗುತ್ತೀ? ನನ್ನ ಆಲೋಚನೆ ಕೇಳಿ ಸುಮ್ಮನೆ ಹೋಗಿಬಿಡು. ಇಲ್ಲದಿದರೆ ಇನ್ನೂ ಹೀನವಾದ ಪ್ರಾಣಿಯಾಗಿ ಮಾರ್ಪಡಿಸಿ ಬಿಡುತ್ತೇನೆ. ಜಾಗ್ರತೆ !" ಎಂದನು.

ಅಲೀ ಅವನ ಮಾತನ್ನು ಕಿವೀ ಮೇಲೆ ಹಾಕಿ ಕೊಳ್ಳದೆ, ಅಜರಯ್ಯನ ಮೇಲೆ ಧುಮುಕಿನು. ಅಜರಯ್ಯ ಅವನ ಮೇಲೆ ಇನ್ನಿಷ್ಟು ಮಂತ್ರದ ನೀರು ಚೆಲ್ಲಿ, ಅವನನ್ನು ಕರಡಿಯಾಗಿ ಬದಲಾಯಿಸಿ ಬಿಟ್ಟನು. ಕರಡಿ ಅತ್ತಿತ್ತ ಹಾರಾಡಿಕೊಂಡು ಕೋಣೆ ಯೊಳಗೇ ಇತ್ತು.

ಮರುದಿನ ಅಜರಯ್ಯನ ಮಗಳು ಕಮರ್ ತಂದೆಯ ಬಳಿಗೆ ಬಂದು, "ಅಪ್ಪಾ, ಈ ಹುಡುಗ ನನ್ನನ್ನು ಮದುವೆ ಮಾಡಿಕೊಳ್ಳುತ್ತಾನೋ ಕೇಳಿರಿ" ಎಂದಳು. "ನಾನು ಕೇಳಲಾರೆ, ನೀನೇ ಕೇಳು. ಕರಡಿ ಯಾದರೂ ಮಾತಾಡುತ್ತಾನೆ" ಎಂದನು ಅಜರ್.

ಕಮರ್ ಅಲೀ ಕರಡಿಯ ಬಳಿಗೆ ಹೋಗಿ, ನಿನಗೆ ಬೇಕಾದದ್ದು ನಾನೋ, ನನ್ನ ವಸ್ತುಗಳೋ?" ಎಂದು ಕೇಳಿದಳು.

"ದಿಲ್ಲೈಲಾಳ ಮಗಳು ಜೀನಾಬಳನ್ನು ಮದುವೆ ಮಾಡಿಕೊಳ್ಳಲು ನಿನ್ನ ಆ ಬಂಗಾರದ ವಸ್ತುಗಳೆಲ್ಲಾ ನನಗೆ ಬೇಕು" ಎಂದನು ಪಾದರಸ.

ತಂದೆಯೊಡನೆ ಕಮರ್ ಆ ಸಂಗತಿ ಹೇಳಿದಾಗ, "ಅವನ ಮನಸ್ಸು ಮಾರಲಾರದು, ನೋಡಿದಿಯಾ?" ಎಂದನು ಅಜರ್. ಆಮೇಲೆ ಅವನು ಅಲೀಮೇಲೆ ಮಂತ್ರದ ನೀರು ಚೆಲ್ಲಿ ಕೋತಿಯನ್ನಾಗಿ ಮಾಡಿದನು.

ಆದಿನ ರಾತ್ರಿ ಕಮರ್ ಒಂದು ನಿಶ್ಚಯಕ್ಕೆ ಬಂದಳು. ತಾನು ಪಾದರಸ ಅಲೀಗೆ ಸಹಾಯ

ಮಾಡಲೇ ಬೇಕು. ಅವನು ತನ್ನನ್ನು ವಿವಾಹಮಾಡಿಕೊಳ್ಳದಿದ್ದರೂ ಸರಿಯೆ, ಅವನ ಸುಖಕ್ಕಾಗಿ ತನ್ನ ವಸ್ತುಗಳನ್ನು ಕೊಡಲೇ ಬೇಕು. ಇಲ್ಲದಿದ್ದರೆ ಅವನು ಸಾಯುತ್ತಾನೆ. ಅದು ಮಹಾ ಪಾಪ ! ಆ ಪಾಪಕ್ಕೆ ತಾನೇ ಬಾಧ್ಯಳಾದೇನು. ಹೀಗೆ ನಿಶ್ಚಯಿಸಿ ಆ ರಾತ್ರಿಯಲ್ಲಿ ತನ್ನ ತಂದೆಯೊಂದಿಗೆ ವಾದಮಾಡಿ, ಇಲ್ಲದಿದ್ದರೆ ತಾನು ಸಾಯುವೆನೆಂದು ಹೆದರಿಸಿ ಅವನನ್ನು ಒಪ್ಪಿಸಿದಳು. ತರುವಾಯ ತನ್ನ ವಸ್ತುಗಳನ್ನೆಲ್ಲಾ ಬಂಗಾರದ ಹರಿವಾಣದಲ್ಲಿಟ್ಟು, ಕೋತಿರೂಪದಲ್ಲಿರುವ ಪಾದರಸನ ಬಳಿಗೆ ತಂದು, ಅವನನ್ನು ಮನುಷ್ಯನನ್ನಾಗಿ ಮಾಡಿಸಿ, "ಇಕೋ, ಇವುಗಳನ್ನು ಒಯ್ದು ನಿನ್ನ ಜೀನಾಬಳನ್ನೇ ಮದುವೆಯಾಗು" ಎಂದಳು.

ಪಾದರಸ ಅಲೀಗೆ ಕಮರಳ ಮೇಲೆ ತುಂಬಾ ಅಭಿಮಾನ ಉಂಟಾಯಿತು. ಅವನು ಅವಳನ್ನು ಕೂಡಾ ಕರೆದುಕೊಂಡು ಹಸನ್, ಅಹ್ಮದರ ಬಳಿಗೆ ಹೋದನು.

"ನೀನು ಜೀನಾಬಳನ್ನು ಮದುವೆಯಾದ ಮೇಲೆ ಕಮರಳನ್ನು ಕೂಡಾ ಮದುವೆ ಮಾಡಿಕೊಳ್ಳುವುದು ಒಳ್ಳೆಯದು. ಇವಳು ತಂದೆಗೆ ಒಬ್ಬಳೇ ಮಗಳಾದುದರಿಂದ, ಅವನ ಆಸ್ತಿಪೂರಾ ಅವನ ಅನಂತರ ಕಾನೂನಿನ ಪ್ರಕಾರ ನಿನಗೇ ದಕ್ಕುತ್ತದೆ" ಎಂದರು ಹಸನ್ ಅಹ್ಮದರು.

ಅವರು ದಿಲ್ಲೈಲಾಳನ್ನೂ, ಜೀನಾಬಳನ್ನೂ, ಜುರೇಕನನ್ನೂ ಕರೆಯಿಸಿದರು. ಜುರೇಕನ ಸಾಕ್ಷ್ಯದಲ್ಲಿ ಪಾದರಸನು ಜೀನಾಬಳಿಗೆ ಬಂಗಾರದ ದುಪಟಿ, ಶಿಖಾಭರಣ, ಒಡ್ಯಾಣ, ಚಡಾವುಗಳನ್ನು ಶುಲ್ಕದ ಭರಣವಾಗಿ ಕೊಟ್ಟನು. ಜುರೇಕ್ ಜೀನಾಬಳನ್ನು ಪಾದರಸ ಅಲೀಗೆ ಕೊಡಲು ಒಪ್ಪಿದನು.

ಈ ಭರಣದ ವಸ್ತುಗಳನ್ನು ಸಂಪಾದಿಸಲು ಅಲೀ ಪಟ್ಟ ಕಷ್ಟಗಳನ್ನು ಕೇಳಿದ ಮೇಲೆ, ಅಲೀ ಪಾದರಸನು ಕಮರಳನ್ನು ಕೂಡಾ ಮದುವೆಮಾಡಿಕೊಳ್ಳಲು ಜೀನಾಬ್ ಒಪ್ಪಿದಳು. ಬೇಗದಲ್ಲೇ ಅವರಿಬ್ಬರಿಗೂ ಪಾದರಸ ಅಲೀಯೊಂದಿಗೆ ಮದುವೆಯಾಯಿತು.

ಕೆಲವು ದಿನಗಳ ಮೇಲೆ ಪಾದರಸನು ಖಲೀಫನ ದರ್ಶನಮಾಡಿ ತನ್ನನ್ನು ದರಬಾರಿನಲ್ಲಿ ಇಟ್ಟುಕೊಳ್ಳಬೇಕೆಂದು ಅರ್ಜಿ ಮಾಡಿಕೊಂಡನು. ಆ ಅರ್ಜಿಯನ್ನು ಇಬ್ಬರು ಕೋತ್ವಾಲರೂ, ಪಾರಿವಾಳದ ಅಂಚೆ ನಿರ್ವಾಹಕರೂ ಬಲಪಡಿಸಿದುದರಿಂದ, ಖಲೀಫನು ಅಲೀಯನ್ನು ರಾಜಭಟರ ಮೇಲೆ ಸರದಾರನನ್ನಾಗಿ ನಿಯಮಿಸಿದನು, ತಿಂಗಳಿಗೆ ಸಾವಿರ ದೀನಾರಗಳ ವೇತನ ಪಡೆಯುತ್ತ, ಅಲೀ ಪಾದರಸನು ಜೀನಾಬ್ ಕಮರ್‌ಗಳೊಂದಿಗೆ ಸುಖವಾಗಿದ್ದನು.

(ಮುಗಿಯಿತು)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೧ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Brahm Dev



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಅಕ್ಟೋಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಆಗಸ್ಟ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: "ಈಗ ಹಾಲು ಕೊಡ್ಬೇಕು ಬಿಡೋ ಕೆಳಗೆ!"

ಎರಡನೇ ಫೋಟೋ: "ಈಗ ಹಾಲ್ಕುಡಿದು ಮತ್ತೆ ಇವ್ಳೇ ಕೊಡ್ತಾಳೆ ನಮ್ಗೆ"

ಕಳುಹಿಸಿದವರು: ಹೆಚ್. ಗೀತಾ

C/o ಹೆಚ್. ಸಂಜೀವರಾವ್, ಸುರತಕಲ್ಲು ದ.ಕ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

**Results of Chandamama—Camlin Colouring Contest No. 20 (Kannada)**

*1st Prize:* Ravindra V, Belgaum-590-003; *2nd Prize:* B. Bharathi, Perla; *3rd Prize:* S. Ranganath, Bangalore-28; *Consolation Prizes:* A. Padmalatha, Bangalore-10; M. K. Dinesh, Mysore-4; Kumarshwami S. M., Nidagundi; Devesh R. Hoskote, Bijapur-586 101; G. S. Geetha, K.G.F-563 115.